ಗಳಗನಾಥ-ಸುರಸ-ಗ್ರಂಥಮಾಲೆ.

ಗ್ರಂಥ ೩.

# ಸದ್ಗುರು-ಪ್ರಭಾವ

ಲೇಖಕ

ವೇಂಕಟೇಶ ತಿರಕೊ ಕುಲಕರಣಿ ಗಳಗನಾಥ

(ಸಂಪಾದಕ:-**ಸದ್ಗುರು**)

೧ ನೆಯ ಆವೃತ್ತಿ - ೧೦೦೦ ಪ್ರತಿಗಳು

ಬೆಂಗಳೂರು ಸಿಟಿ

ಸ್ಟ್ಯಾಂಡರ್ಡ್ ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟಿತು.

೧೯೨೮

ಓಂ

ನಮೋ ಭಗವತೇ ಶ್ರೀಸಿವಾಸಾಯ

# ಸದ್ಗುರು - ಪ್ರಭಾವ

ಎಂಬ

ಈ ಸುರಸ ಪ್ರಬಂಧರೂಪ-ತುಲಸೀ-ಪತ್ರವನ್ನು

**ಶ್ರೀಮನ್ಮಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರ**

ಅಭ್ಯುದಯಕ್ಕಾಗಿ

ಪಾಮರನಾದ

ವೇಂಕಟೇಶ ತಿರಕೊ ಕುಲಕರಣಿ ಗಳಗನಾಥನು ನಾನು

ನನ್ನ ಕುಲಸ್ವಾಮಿಯಾದ

ಕಲ್ಯಾಣಪುರೀವಾಸಸ್ಥ

ಶ್ರೀ ಲಕ್ಷ್ಮೀ ವೇಂಕಟೇಶನ ದಿವ್ಯ ಚರಣಗಳಲ್ಲಿ

ಅನನ್ಯಭಕ್ತಿಯಿಂದ ಸಮರ್ಪಿಸಿರುವೆನು.

# ಪ್ರಸ್ತಾವನೆ

ಶ್ರೀ ಲಕ್ಷ್ಮೀ ವೇಂಕಟೇಶನ ಕೃಪೆಯಿಂದ ಬೆಂಗಳೂರಿಗೆ ಬಂದು ನಾಲ್ಕು ತಿಂಗಳಲ್ಲಿ ಬರೆದು ಮುದ್ರಿಸಿದ ಪುಸ್ತಕಗಳಲ್ಲಿ ಇದು ಮೂರನೆಯದು; ಇನ್ನೊಂದು ಬರೆದು ಸಿದ್ಧವಾಗಿರುವ "ಧಾರ್ಮಿಕತೇಜ" ವೆಂಬ ದೊಡ್ಡ ಕಾದಂಬರಿಯನ್ನು ಮುದ್ರಿಸಿ ಬಿಟ್ಟರೆ, ಒಟ್ಟಿಗೆ ಇಲ್ಲಿ ತಿಂಗಳಿಗೆ ಒಂದೊಂದ ರಂತೆ ಕ್ರೌನ ಅಷ್ಟಪತ್ರದ ೮೫೦ ಪುಟದ ನಾಲ್ಕು ಪುಸ್ತಕಗಳನ್ನು ಮುದ್ರಿಸಿದ ಹಾಗಾಯಿತು! ಇದರಲ್ಲಿ ೬೦೦ ಪುಟದ ವಿಷಯವನ್ನು ಇಲ್ಲಿ ಬೆಂಗಳೂರಲ್ಲಿಯೇ ಬರೆದು ಮುಗಿಸಿರುವೆನು!

ಇವುಗಳಲ್ಲಿ ಮೊದಲನೆಯ "ರಾಣೀ-ಮೃಣಾಲಿನಿ" ಎಂಬ ಪುಸ್ತಕವನ್ನು ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರ, ಹಾಗು ಎರಡನೆಯ "ರಾಣಾ - ರಾಜಸಿಂಹ" ಎಂಬ ಪುಸ್ತಕವನ್ನು ಶ್ರೀಮದ್ರಾಜಕುಮಾರ ಜಯಚಾಮರಾಜ ಒಡೆಯರ್ ಬಹದ್ದೂರರವರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀ ವೇಂಕಟೇಶನ ದಿವ್ಯಚರಣಗಳಿಗೆ ಮಲ್ಲಿಕಾ-ಚಂಪಕ ಕುಸುಮಗಳಾಗಿ ಅರ್ಪಿಸಿರುವೆನು! ಪ್ರಕೃತದ "ಸದ್ಗುರು ಪ್ರಭಾವ" ವೆಂಬ ಈ ಪ್ರಬಂಧರೂಪ ತುಲಸೀ ಪತ್ರವನ್ನೂ, ಇನ್ನು ಬೇಗನೆ ಪ್ರಿಂಟಾಗುವ "ಧಾರ್ಮಿಕತೇಜ" ಎಂಬ ಕಾದಂಬರೀರೂಪ ಕಮಲ ಪುಷ್ಪವನ್ನೂ ಧರ್ಮ-ರಕ್ಷಕರಾದ ಶ್ರೀಮನ್ಮಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರರವರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀ ವೇಂಕಟೇಶನ ದಿವ್ಯ ಚರಣಗಳಿಗೆ ಅರ್ಪಿಸಿ ಕೃತಾರ್ಥನಾಗುವೆನು.

ಹೀಗೆ ಒಂದು ಕ್ಷಣದ ಅವಕಾಶವೂ ಇಲ್ಲದಂತೆ ಒಂದೇ ಸವನೆ ನಾಲ್ಕು ಪುಸ್ತಕಗಳನ್ನು ಬರೆದು ಮುಗಿಸಿ ಮುದ್ರಿಸಿದ್ದು, ವಿದ್ಯಾ ಪಕ್ಷಪಾತಿಗಳಾದ

ಶ್ರೀಮನ್ನಾಲ್ವಡಿ ಕೃಷ್ಣ ಧೊರೆಗಳವರ ಪುಣ್ಯಭೂಮಿಯು, ಹಾಗು ಬೆಂಗಳೂರ ವಿದ್ವಾಂಸರ ದರ್ಶನದ ಗುಣವು! ಅದರಲ್ಲಿಯೂ "ಸದ್ಗುರು-ಪ್ರಭಾವ" ವೆಂಬ ಈ ಪ್ರಬಂಧವನ್ನು ಬರೆದದ್ದರಿಂದಂತು ನನಗೆ ಬಹಳ ಸಂತೋಷವಾಗಿರುತ್ತದೆ; ಯಾಕಂದರೆ ಇದರಲ್ಲಿ ಸದ್ಗುರು-ಪ್ರಭಾವವು ಗೌರವದ ಹತ್ತು ಹೊಸ ಪ್ರಬಂಧಗಳ ಉಪೋದ್ಘಾತದ ಲೇಖಗಳನ್ನು ಬರೆಸಿ, ನನ್ನಂತಹ ಪಾಮರನಿಗೆ ಹತ್ತು ಹೊಸ ಪುಸ್ತಕಗಳನ್ನು ಬರೆಯುವ ಮಾರ್ಗವನ್ನು ತೋರಿಸಿ ಕೊಟ್ಟಂತಾಗಿರುವದು !

ನನ್ನ ಈ ಗುರುಪ್ರಭಾವವನ್ನು ದಯವಿಟ್ಟು ಸಂಪೂರ್ಣವಾಗಿ ಓದಿದರೆ, ಮೂವತ್ತು ವರ್ಷಗಳ ನನ್ನ ಭಾಷಾಸೇವೆಯ ಪ್ರತಿಫಲ ದ್ವಾರದಿಂದ ನನ್ನ ಆಶ್ರಯದಾತೃಗಳಾದ ಕನ್ನಡಿಗರು ಅರವತ್ತು ಸಹಸ್ರ ರೂಪಾಯಿಗಳನ್ನು ವೈದಿಕ ಪಾಠಶಾಲೆಯಂತಹ ಪವಿತ್ರ ಕಾರ್ಯದಲ್ಲಿ ವಿನಿಯೋಗಿಸಿದ್ದು ಗೊತ್ತಾಗುವದಲ್ಲದೆ, ಆ ಪವಿತ್ರ ಕಾರ್ಯಕ್ಕಾಗಿ ನನಗಾದ ಹದಿನಾಲ್ಕು ಸಹಸ್ರ ರೂಪಾಯಿ ಸಾಲದಲ್ಲಿ ಇನ್ನು ಉಳಿದಿರುವ ಆರು ಸಹಸ್ರ ರೂಪಾಯಿ ಸಾಲವನ್ನು ನನಗೆ ಆಯಾಸವಾಗದಂತೆ ಬೇಗನೆ ತೀರಿಸುವದು ಅವಶ್ಯವೆಂಬ ಮಾತೂ ಗೊತ್ತಾಗುವದು ; ಆದರೆ ಸಾಲತೀರಿಸಿ ನನ್ನ ಸದ್ಗುರು ಮಾಸಪತ್ರಿಕೆಯನ್ನೂ, ವೈದಿಕ ಪಾಠಶಾಲೆಯನ್ನೂ ಒಂದು ವರ್ಷದೊಳಗೆ ಜೀರ್ಣೋದ್ಧಾರಮಾಡಿದ ಶ್ರೇಯಸ್ಸು ಮೈಸೂರ ಕನ್ನಡಿಗರಿಗೆ ದೊರೆತರೆ, ನನಗೆ ಬಹಳ ಸಂತೋಷವಾಗುವದು ! ಯಾಕಂದರೆ ರಾಜರ್ಷಿ ನಾಲ್ವಡಿ ಕೃಷ್ಣ ಭೂವರರ ನಾಡಿದು ! ಆ ಸಂತೋಷವು ನನಗೆ ಲಭಿಸಬೇಕೆಂಬ ಇಚ್ಛೆಯಿಂದಲೇ ಪುಸ್ತಕರೂಪ ಹೂ-ತುಲಸಿಗಳಿಂದ ಶ್ರೀ ಲಕ್ಷ್ಮೀಪತಿಯ ಪಾದಗಳನ್ನು ನಾನು ಪೂಜಿಸಿರುವೆನು !

ಇಲ್ಲಿಯ ಸ್ಟ್ಯಾಂಡರ್ಡ್ ಪ್ರೆಸ್ಸಿನ ತರುಣ ಮಾಲಕರಾದ ರಾ|| ರಾ|| ಬಿ. ಎಲ್. ನರಸಿಂಹಯ್ಯ, ಹಾಗು ಅವರ ಮಿತ್ರರಂತಿರುವ ಕೆಲಸಗಾರರ

ಕರ್ತವ್ಯ ತತ್ಪರತೆಯನ್ನೂ, ವಚನ ಪಾಲನವನ್ನೂ, ಪ್ರಾಮಾಣಿಕ ತನ ವನ್ನೂ, ಮಾಡಿದ ಉತ್ತಮ ಕೆಲಸವನ್ನೂ ನೋಡಿ ನನಗೆ ಬಹಳ ಸಂತೋಷವಾಯಿತು! ಇದಕ್ಕೆಲ್ಲ ಅವರ ತಂದೆಯವರಾದ ರಾ|| ರಾ|| ಬಿ. ಆರ್. ನರಸಿಂಹಯ್ಯ ಇವರ ಪುಣ್ಯವೇ ಕಾರಣವೆಂದು ನಾನು ತಿಳಿಯು ವೆನು. ಶ್ರೀ ಲಕ್ಷ್ಮೀ ವೇಂಕಟೇಶನು ಇವರಿಗೆ ಉತ್ತರೋತ್ತರ ಶ್ರೇಯೋಭಿ ವೃದ್ಧಿಗಳನ್ನುಂಟುಮಾಡಲೆಂದು ಪ್ರಾರ್ಥಿಸುತ್ತೇನೆ.

ಸರ್ವೇಜನಾಃ ಸುಖಿನೋಭವಂತು!

ಕನ್ನಡಿಗರ ಸೇವಕ
ವೇಂಕಟೇಶ ತಿರಕೊ ಕುಲಕರಣಿ,
ಗಳಗನಾಥ.
ಸಂಪಾದಕ "ಸದ್ಗುರು"
ಜಿಲ್ಹಾ ಧಾರವಾಡ.

೨ನೇ ಬೀದಿ, ೬೩ನೆ ನಂ.
ಬಸವನಗುಡಿ, ಬೆಂಗಳೂರು ಸಿಟಿ.



# ವಿಷಯಾನುಕ್ರಮಣಿಕೆ.

ಶ್ರೀ ಲಕ್ಷ್ಮೀ ವೇಂಕಟೇಶಾಯ ನಮಃ.

ವಿದ್ವತ್ಸಮೂಹಾಲಂಕೃತರಾದ

**ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರಿಗಾಗಿ**

ಬರೆದ

# ಸದ್ಗುರು-ಪ್ರಭಾವ



## ೧ ಪೀಠಿಕೆ

**ಶ್ರೀ** ಸದ್ಗುರು-ಪ್ರಭಾವವು ಪತಿತನನ್ನು ಪಾವನನಾಗಮಾಡುವಲ್ಲಿ ಸಂಶಯವಿಲ್ಲ. ಪ್ರತಿ ಒಬ್ಬ ಹಿತೇಚ್ಛುವು ಈಗಿನ ಕಲಿಯುಗದ ಆಟಕ್ಕೆ ಮಹತ್ವಕೊಡದೆ, ದೇವರಲ್ಲಿ ಭಕ್ತಿಯನ್ನಿಡಬೇಕು, ಧರ್ಮದಲ್ಲಿ ಭಕ್ತಿಯನ್ನಿಡಬೇಕು, ಗುರುಹಿರಿಯರಲ್ಲಿ ಭಕ್ತಿಯನ್ನಿಡಬೇಕು, ರಾಜನಲ್ಲಿ ಭಕ್ತಿಯನ್ನಿಡಬೇಕು, ತನ್ನಲ್ಲಿ ಭಕ್ತಿಯನ್ನಿಡಬೇಕು! ಇದಕ್ಕೆ ವಿರುದ್ಧವಾದ ಅವಿಶ್ವಾಸದ ವ್ಯವಹಾರವು ಆಸುರೀ ವ್ಯವಹಾರವಲ್ಲದೆ ಮತ್ತೇನು? ಆಸುರೀ ವ್ಯವಹಾರದ ಫಲವು ಅಶಾಂತಿಯಾಗಿರಲು, “ ಅಶಾಂತಸ್ಯ ಕುತಸ್ಸುಖಂ ” ಎಂಬ ಭಗವದುಕ್ತಿಯಂತೆ, ಶಾಂತಿವಿಹೀನನಿಗೆ ಸುಖವೆಲ್ಲಿಯದು? ಈ ದೃಷ್ಟಿಯಿಂದ ಈಗಿನ ಪರಿಸ್ಥಿತಿಯನ್ನು ನೋಡಿದರೆ, ದಿನದಿನಕ್ಕೆ ಜಗತ್ತಿನಲ್ಲಿ ಅಶಾಂತಿಯು ಹೆಚ್ಚುತ್ತ, “ ಉಂಡವನಿಗೂ ಸುಖವಿಲ್ಲ, ಉಪವಾಸವಿದ್ದವನಿಗೂ ಸುಖವಿಲ್ಲ ” ವೆಂಬಂತೆ, ಜಗತ್ತಿಗೆ ಬೆಂಕೆಹತ್ತಿದ ಹಾಗಾಗಿ ತಾಪದ ಸಾಮ್ರಾಜ್ಯವು ತೀವ್ರವಾಗುತ್ತ, ಸರ್ವತ್ರ ವಿಷಮತೆಯು ಒಡೆದು ಕಾಣುತ್ತಿರುವದು. ಹಿತದ ಮಾರ್ಗವನ್ನು ಕೆಡಿಸಿ, ಅಹಿತದ ಮಾರ್ಗವನ್ನು ರಾಜಮಾರ್ಗವಾಗಿ ಮಾಡುವ, ಹಾಗು ಕಲಿಪ್ರಭೆಯಿಂದ ರಮ್ಯರಾಗಿ ತೋರುವ ಶ್ರೇಷ್ಠ ಅಹಂಕಾರಿಗಳೇ ಈಗಿನ ರಾಷ್ಟ್ರಗುರುಗಳು! ಅವರ ಈಗಿನ ಅಪಕ್ವ ಚಂಚಲ

ವೃತ್ತಿಯ ಆಧಿಪತ್ಯದಲ್ಲಿ ಧರ್ಮಕ್ಕೆ ಸ್ಥಿರತ್ವವಿಲ್ಲ, ರಾಜ್ಯದಾಡಳಿತಕ್ಕೆ ಸ್ಥಿರತ್ವ ವಿಲ್ಲ, ಕಾಯದೆಗಳಿಗೆ ಸ್ಥಿರತ್ವವಿಲ್ಲ, ಭಕ್ತಿ-ಪ್ರೇಮ-ವಿಶ್ವಾಸಗಳಿಗೆ ಸ್ಥಿರತ್ವ ವಿಲ್ಲ; ಇವೆಲ್ಲವೂ ಸ್ವಾರ್ಥಪರಾಯಣತೆಯ ಸ್ವಚ್ಛಂದವೃತ್ತಿಯಲ್ಲಿ ದಿನ ಕ್ಕೊಂದು ಚಂದದಿಂದ ಬದಲಾಗುತ್ತ "ಪಿಂಡಗಳಷ್ಟು ಪ್ರಕೃತಿಗಳು" ಎಂಬ ವ್ಯಾವಹಾರಿಕ ಸಿದ್ಧಾಂತವೇ ಎಲ್ಲದರ ಜೀವಾಳವಾಗಿಹೋಗಿದೆ. ಈಗ ಯಾರಹಂಗು ಯಾರಿಗೂ ಉಳಿಯದೆ ಹುಡುಗರಿಂದ ಹಿರಿಯರ ವರೆಗೆ ಪ್ರತಿ ಒಂದು ವ್ಯಕ್ತಿಯು, ಅದು ಸ್ತ್ರೀಯಿರಲಿ—ಪುರುಷನಿರಲಿ "ಸ್ವಾತಂತ್ರ್ಯ ಸ್ವಾತಂತ್ರ್ಯ" ಎಂದು ಕೂಗುತ್ತ ಸರ್ವತಂತ್ರ ಸ್ವತಂತ್ರ ಈಶ್ವರ ಸ್ವರೂಪ ವನ್ನು ಹೊಂದಿಬಿಡುತ್ತಲಿದೆ! ಅಂದಬಳಿಕ ಯಾರು ಯಾರಿಗೆ ಹೇಳಬೇಕು, ಯಾರು ಯಾರ ಮಾತನ್ನು ಕೇಳಬೇಕು ?

ಹೀಗೆ "ಸ್ವಾತಂತ್ರ್ಯ" ವೆಂಬ ರಮ್ಯವಾದ ಹೆಸರಿನಿಂದ ಕೂಗುತ್ತ, ಹೇಸಿ ವಿಷಯಸುಖಕ್ಕೆ ದಾಸಾನು ದಾಸರಾಗುತ್ತಿರುವ ಚಂಚಲವೃತ್ತಿಯ ಮಾನವರು ನಾವು ಪಶುಗಳಿಗಿಂತಲೂ ಕಡೆಯಲ್ಲದೆ ಮತ್ತೇನು? ಸ್ವಸ್ವರೂಪ ಜ್ಞಾನಿಯೊಬ್ಬನಲ್ಲದೆ ಆದಾವನು ಜಗತ್ತಿನಲ್ಲಿ ಸ್ವತಂತ್ರನು ? ನಮ್ಮಂತಹ ವಿಷಯಸುಖದ ರೊಜ್ಜಿನಲ್ಲಿ ನಲಿದಾಡುತ್ತಿರುವ ನೊರಜುಗಳು ಸ್ವತಂತ್ರರೆ? ಮುಂದಿ, ನೊಂದಾರು-ಜೆಂದಾರು-ಅಂದಾರು ಎಂಬದರ ಅಂಜಿಕೆಯಿಲ್ಲದೆ ಮನ ಸ್ಸಿಗೆಬಂದಂತೆ ಕುಣಿಯುವ ನಾವು, ಪಶುಗಳಿಗಿಂತಲೂ ಕಡೆಯಲ್ಲವೆ? ಹುಟ್ಟು ಗುಣದ ಪ್ರಭಾವದಿಂದಲೇ ಆಗಲಿ, ಪಶುಗಳಷ್ಟು ನಿಯಮಿತಾಚರಣೆಯೂ ನಮ್ಮಲ್ಲಿ ತೋರದಾಗಿದೆ ! ದೈವೀ - ಪಾಶವೀ ವೃತ್ತಿಗಳ ಸಮ್ಮಿಶ್ರಣದ ಮನುಷ್ಯಪ್ರಾಣಿಯಲ್ಲಿಯ ದೈವೀ ವೃತ್ತಿಯು ಮರೆಯಾಗುತ್ತ, ಪಾಶವೀ ವೃತ್ತಿಯು ಬೆಳಕಿಗೆ ಬರತೊಡಗಿ ನಾವು ಕ್ರೂರ ಪಶುಗಳಾಗುವ ಹಾದಿಯನ್ನು ಭರದಿಂದ ಈಗ ಹಿಡಿಯುತ್ತಲಿದ್ದೇವೆ! ಶಿವ ಶಿವ! ಎಂತಹ ದುಃಖದ ಸಂಗತಿ ಯಿದು! ಮನುಷ್ಯನ ಬಾಳು ಕ್ಷಣಮಾತ್ರ ಮಿಂಚಿಹೋಗತಕ್ಕದ್ದೆಂಬ ಮಾತ ನ್ನು ಆರ್ಯರೆನಿಸುವ ನಾವು ಮರೆತುಬಿಡುವಷ್ಟು ದೇಹಾತ್ಮವಾದಿಗಳು ಆಗ ತೊಡಗಬೇಕೇ? ನಮಗೆ ಶ್ರುತಿಯ ಅಪ್ಪಣೆಯು ಬೇಡ, ಸ್ಮೃತಿಗಳ ಉಪ ದೇಶವುಬೇಡ, ಪುರಾಣಗಳ ಮೈತ್ರಿಯು ಬೇಡ! ಇದೆಂತಹ ವೈದಿಕ ಆರ್ಯರು

ನಾವು? ಜಗತ್ತನ್ನೇ ಈಶ್ವರಸ್ವರೂಪವಾಗಿ ನೋಡಿ, ಶಾಜನಿಷ್ಠಾಪೂರ್ವಕವಾದ ಲೋಕಾರಾಧನೆಯೇ ವ್ಯಾಪಕವಾದ ಈಶ್ವರಾರಾಧನೆಯೆಂದು ತಾರತಮ್ಯದಿಂದ ತಿಳಿದು, ವ್ಯವಹಾರಕ್ಕೂ, ಪರಮಾರ್ಥಕ್ಕೂ ಬಾಧೆಬಾರದಂತೆ ಲೋಕವೃತ್ತಿಯಿಂದ ನಡೆಯುವ ಶೀಲದ ವೈದಿಕ ಆರ್ಯರು, ನಾವು ಆಗಿರಬಹುದೆ? ನಾಸ್ತಿಕತೆ, ಅರಾಜಕತೆ, ಪರಹಿಂಸಾಪರತೆ, ಅಹಂಭಾವ ಇವುಗಳಿಗೆ ಇಂಬುಕೊಡತೊಡಗಿರುವ ನಮ್ಮ ತಾಮಸೀ ಹೃದಯವು ವೈದಿಕ ಆರ್ಯರ ನಿಜವಾದ ಸಾತ್ವಿಕ ಹೃದಯವೇ ಆಗಿರಬಹುದೆ? ಈ ಪ್ರಶ್ನೆಗಳು ಅಹಂಕಾರಪ್ರಧಾನವಾಗಿರುವ, ಹಾಗು ಅಹಿತವನ್ನೇ ಹಿತವಾಗಿ ಭಾವಿಸಿ ಭ್ರಮೆಗೆ ಒಳಗಾಗಿರುವ ಈಗಿನ ಆಸುರೀ ಕಾಲದಲ್ಲಿ ಬಹುಜನರಿಗೆ ಹಾಸ್ಯಾಸ್ಪದವಾಗಿ ತೋರಿದರೂ, ನಿಜವಾದ ಆರ್ಯಹೃದಯವು ಈ ಭಯಂಕರ ಸ್ಥಿತಿಯ ದುಷ್ಪರಿಣಾಮಕ್ಕಾಗಿ ಕನಿಕರಪಟ್ಟು ಕರಗಿ ಕರುಣಾರಸ ಮಯವಾಗದೆ ಹೋಗದು !

ಆದರೆ ಇಂತಹ ಭಯಂಕರ ಸ್ಥಿತಿಯಲ್ಲಿಯೂ ಮನುಷ್ಯಪ್ರಾಣಿಗೆ ಒಂದು ತರಣೋಪಾಯವು ಉಂಟು. ಅದಾವದೆಂದರೆ, ಸತ್ಸಂಗವು! ಈ ಸತ್ಸಂಗದ ಮಹಿಮೆಯನ್ನು ಜಗತ್ತಿನೊಳಗಿನ ಯಾವಧರ್ಮವು ವರ್ಣಿಸಿರಲಿಕ್ಕಿಲ್ಲ? ಸತ್ಸಂಗ ಪ್ರಾಪ್ತಿಯು ಸರ್ವಕಲ್ಯಾಣಮೂಲವೆಂದೂ, ದುಸ್ಸಂಗಪ್ರಾಪ್ತಿಯು ಸರ್ವಾನರ್ಥ ಮೂಲವೆಂದೂ ಎಲ್ಲ ಧರ್ಮಗಳು ಹೇಳುತ್ತಿರುವವು. ನಮಗೆ ವೈದಿಕರಿಗಂತು ಇದು ಗುರುಮಂತ್ರ! ಈಶ್ವರಾನುಗ್ರಹವನ್ನೊದಗಿಸಿಕೊಡುವ ಮೂರು ಸಂಗತಿಗಳು ಜಗತ್ತಿನಲ್ಲಿ ದುರ್ಲಭವೆಂದು ಶ್ರೀಮದಾಚಾರ್ಯರು ತಮ್ಮ ವಿವೇಕ ಚಿಂತಾಮಣಿಯಲ್ಲಿ ಹೇಳಿರುವರು. ಜಗತ್ತಿನಲ್ಲಿ ತೀವ್ರತರ ಪುಣ್ಯಶಾಲಿಯು ಸಾರ್ವಭೌಮಪದವಿಯನ್ನು ದೊರಕಿಸಬಹುದು; ಬೇಕಿದ್ದರೆ ಕಠಿಣತರ ತಪಸ್ಸಿನಿಂದ ಆರ್ಯರ ದೈವೀಭಾವದ ಸ್ವರಾಜ್ಯವನ್ನು ದೊರಕಿಸಬಹುದು; ಆದರೆ ಭಗವತ್ಪಾದರ ಉಕ್ತಿಯಂತೆ ಮನುಷ್ಯತ್ವ, ಮುಮುಕ್ಷುತ್ವ, ಮಹಾಪುರುಷ ಸಂಶ್ರಯ ಇವು ಮೂರನ್ನು ಪಡೆಯುವದು ನೀಚಸ್ವಾರ್ಥಪರರಿಗೆ ತೀರಾ ಅಶಕ್ಯವು. ಅವುಗಳಲ್ಲಿಯೂ ಮಹಾಪುರುಷ ಸಂಶ್ರಯವು, ಅಂದರೆ ಸತ್ಸಂಗವು ದೊರೆಯುವದಂತು ಅತ್ಯಂತ ದುರ್ಲಭವು! ಸತ್ಸಂಗದ ಪ್ರಭಾವವು ಸಾಮಾನ್ಯವಾದದ್ದಲ್ಲ. ಅದು ಮನುಷ್ಯನ ಬುದ್ಧಿಯಲ್ಲಿಯು

ಜಡತ್ವವನ್ನು. ಅಂದರೆ ವಿಷಯಸುಖಾಸಕ್ತಿಯನ್ನು. ಅರ್ಥಾತ್ ನೀಚ ಸ್ವಾರ್ಥಪರತೆಯನ್ನು ಹರಣಮಾಡುವದು; ಮಾತಿನಲ್ಲಿ ಸತ್ಯವನ್ನು ಸೇರಿಸುವದು; ಮಾನವ ಉನ್ನತಿಯನ್ನು, ಅಂದರೆ ಧರ್ಮ. ನೀತಿ, ದಯಾ, ಶಾಂತಿ, ಪರಹಿತದಕ್ಷತೆ ಮೊದಲಾದ ಪವಿತ್ರ ಅಳತೆಗಳಿಂದ ತನ್ನನ್ನು ಅಳೆದುಕೊಳ್ಳುವದನ್ನು ತೋರಿಸುವದು; ಸ್ವಧರ್ಮನಿಷ್ಠೆಯ ಸದಾಚರಣೆಯಿಂದ ಚಿತ್ತವನ್ನ ಸುಪ್ರಸನ್ನವಾಗಮಾಡುವದು; ಪರಹಿತದಕ್ಷನೆಂಬ ಕೀರ್ತಿಯನ್ನು ದಿಕ್ಕುದಿಕ್ಕುಗಳಲ್ಲಿ ಹಬ್ಬಿಸುವದು! ಅಂದಬಳಿಕ ಸತ್ಸಂಗತಿಯು ಮನುಷ್ಯನ ಯಾವ ಕಲ್ಯಾಣವನ್ನು ಮಾಡಲಿಕ್ಕಿಲ್ಲ? ಅಶಾಶ್ವತವಾದ ಐಹಿಕಸುಖದ ಬಡಿವಾಟಕ್ಕೆ ಪ್ರತಿಬಂಧಮಾಡಿ,ಶಾಶ್ವತವಾದ ಪಾರಮಾರ್ಥಿಕ ಸುಖದ ದಾರಿಯ ಕಡೆಗೆ ಮನಸ್ಸನ್ನು ಹೊರಳಿಸುವಮು, ಅಂದರೆ ಅಡ್ಡದಾರಿ ಹಿಡಿದವನನ್ನು ದಾರಿಗೆಹಚ್ಚುವದು ಸತ್ಸಂಗತಿಯ ಮುಖ್ಯಲಕ್ಷಣವಾಗಿರುವದು! ಈ ಲಕ್ಷಣವು ನನ್ನಂತಹ ಪಾಮರನವೃತ್ತಾಂತದಲ್ಲಿಯೂ ಹೇಗೆತೋರುತ್ತಿರುವದೆಂಬದನ್ನು ಅವಲೋಕಿಸುವದು ಪ್ರತಿ ಒಬ್ಬ ಹಿತೇಚ್ಛುವಿಗೆ ಕೌತುಕದ ಸಂಗತಿಯಾಗಿರುತ್ತದೆ; ಯಾಕಂದರೆ, ಜ್ಞಾನಿಗಳ ಆಚರಣೆಯಲ್ಲಿ ಜ್ಞಾನದ ಪ್ರಭಾವವು ತೋರುವದಲ್ಲದೆ, ನನ್ನಂತಹ ಅಜ್ಞಾನಿಯಲ್ಲಿಯಂತೆ ಸತ್ಸಂಗತಿಯ ಪ್ರಭಾವವು ತೋರಲಾರದು; ಆದ್ದರಿಂದ ಸದ್ಗುರುವಿನ ಶಾಶ್ವತವಾದ ಪ್ರಭಾವವೂ, ನನ್ನ ಶಾಶ್ವತವಾದ ಪಾಮರತ್ವವೂ ಒಡೆದು ಕಾಣುವದಕ್ಕಾಗಿ, ಬಹು ಅಚ್ಚುಕಟ್ಟಿನಲ್ಲಿ ನನ್ನ ಸ್ವರೂಪ ಸರ್ವಸ್ವವನ್ನೂ, ಆದರಲ್ಲಿ ಪ್ರಕಾಶಿಸುತ್ತಿರುವ ಶ್ರೀ ಗುರುಪ್ರಭಾವವನ್ನೂ ಕನ್ನಡಿಗರ ಮುಂದೆ ಇದ್ದಕ್ಕಿದ್ದಹಾಗೆ ಇನ್ನು ಇಡುವೆನು !

ಶ್ರೀ ಸದ್ಗುರು-ಪ್ರಭಾವ-ಪೋಷಿತನಾದ ವೇಂಕಟೇಶನೆಂಬ ಹೆಸರಿನ ನಾನು, ಶುಕ್ಲ ಯಜುರ್ವೇದಾಂತರ್ಗತ ಕಣ್ವಶಾಖೆಯ ಸ್ಮಾರ್ತ ಬ್ರಾಹ್ಮಣನು. ನನ್ನ ಗೋತ್ರ ಕೌಂಡಿಣ್ಯ. ನನ್ನ ಪೂಜ್ಯ ಪಿತೃಗಳಲ್ಲಿ ನನ್ನ ತಂದೆಯವರ ಹೆಸರು ತ್ರಿವಿಕ್ರಮಭಟ್ಟರು; ಅಜ್ಜಂದಿರಹೆಸರು ರಾಮಭಟ್ಟರು; ಮುತ್ತಂದಿರ ಹೆಸರು ವೆಂಕಣಭಟ್ಟರು! ನನ್ನ ಕುಲದೈವತವು ಶ್ರೀ ಲಕ್ಷ್ಮೀ ವೇಂಕಟೇಶನು!! ಪುಣ್ಯಶಾಲಿಗಳಾದ ನನ್ನ ಹಿರಿಯರ ಪುಣ್ಯದಿಂದಲೂ,

ಭಗವಂತನಾದ ಶ್ರೀ ಲಕ್ಷ್ಮೀಪತಿಯ ಕೃಪೆಯಿಂದಲೂ ಕನ್ನಡಿಗರ ಸೇವಕ ನೆನಿಸಿರುವ ನಾನು, ಸನ್ಮಾನ್ಯರಾದ ಮೈಸೂರ ಕನ್ನಡಿಗರನ್ನೊಳಗೊಂಡಿರುವ ಸಮಸ್ತ ಕನ್ನಡಿಗರೆಂಬ ಇಷ್ಟದೈವತವನ್ನು ಆಧ್ಯಾತ್ಮಿಕಭಾವದಿಂದ ಭಕ್ತಿ ಪುರಸ್ಸರವಾಗಿ ಮೊದಲು ಅಭಿವಂದಿಸುವೆನು !

ನಾನು ಕೇವಲ ಗಾವಿಲನೆಂತಲೇ ಹೇಳಬಹುದು; ಯಾಕಂದರೆ, ನಾನು ಹುಟ್ಟಿದ ಹಾವನೂರೆಂಬ ನನ್ನ ಮಾತಾಮಹರ ಊರು ಹಳ್ಳಿಯು; ನಾನು ಬೆಳೆದ ನನ್ನ ಸ್ವಂತದ ಗಳಗನಾಥವೆಂಬ ಕ್ಷೇತ್ರಸ್ಥಾನವು ತೀರ ಸಣ್ಣ ಹಳ್ಳಿಯು; ನಾನು ಕಲಿತ ನಾಲ್ಕೂ ಪ್ರಾಥಮಿಕ ಶಾಲೆಗಳೂ ಒಂದಕ್ಕಿಂತ ಒಂದು ಸಣ್ಣವಾದ ಹಳ್ಳಿಯವೆ! ಇಂತಹ ಗಾವಿಲನಾದ ನನಗೆ ದೊರೆತ ಶ್ರೇಷ್ಠ ಶಿಕ್ಷಣವೆಂದರೆ, ಧಾರವಾಡ ಕನ್ನಡ ಟ್ರೇನಿಂಗ ಕಾಲೇಜದ ಮೂರು ವರ್ಷದ ಕೌದಿಯ ಚಂದದ ಹಂಡಬಂಡ ಶಿಕ್ಷಣವು! ನನ್ನ ಕನ್ನಡ ಭಾಷೆಯ ಜ್ಞಾನವು, ಕೇವಲ ಜನ್ಮಭಾಷೆಯೆಂಬ ಪ್ರಧಾನಕಾರಣದಿಂದ ವಿಸ್ತೃತವಾಗ ಬಹುದಾದಷ್ಟರ ಮಟ್ಟಿಗೆ ಬೆಳವಣಿಗೆ ಹೊಂದಿದ್ದು. ಕೊಂಕಣಸ್ಥರ ಸಹ ವಾಸದಿಂದ ತಿಳಿಯಬಹುದಾದಷ್ಟು ಮಹಾರಾಷ್ಟ್ರ ಭಾಷೆಯು ನನಗೆ ತಿಳಿಯು ತ್ತಿರುವದು; ನನ್ನ ಸಂಸ್ಕೃತ ಭಾಷೆಯ ಜ್ಞಾನವು, ನಾನು ಟ್ರೇನಿಂಗ ಕಾಲೇಜದಲ್ಲಿಯ ಪರೀಕ್ಷೆಗಳಿಗಾಗಿ ಮೂರುವರ್ಷ ಓದಿದ ತೀರ ಸಾಮಾನ್ಯ ವಾದ ತಾಳು ತಂತು ಇಲ್ಲದ ಪುಸ್ತಕೀಯ ಜ್ಞಾನದಲ್ಲಿ ಹರಿದು ಮುರಿದು ಉಳಿದದ್ದು. ಇಂಗ್ಲೀಷ ಭಾಷೆಯ ಮೂಲಾಕ್ಷರಗಳನ್ನೂ ಸಾಲಾಗಿ ಬರೆಯು ಲಿಕ್ಕೆ ನನಗೆ ಬರುವದಿಲ್ಲ. ಒಟ್ಟಿಗೆ, ನಾನು ನನ್ನ ಪೂಜ್ಯ ಕನ್ನಡಿಗರ ಮುಂದೆ ಸುಳ್ಳುಹೇಳಿ ಪಾಪಕ್ಕೆ ಯಾಕೆ ಗುರಿಯಾಗಲಿ? ನಾನು ಯಾವ ಭಾಷೆಯ ಅಥವಾ ಯಾವ ಶಾಸ್ತ್ರದ ಅಭ್ಯಾಸವನ್ನೂ ಸಂಕಲ್ಪಪೂರ್ವಕವಾಗಿ ಗುರುಮುಖದಿಂದ ಮಾಡಿದವನಲ್ಲವಾದ್ದರಿಂದ, ನನ್ನಲ್ಲಿ ಯಾವಪಾಂಡಿತ್ಯವೂ ಇರುವದಿಲ್ಲ, ಯಾವ ಪದವೀಧರತ್ವವೂ ಇರುವದಿಲ್ಲ. ತೆರಪಿಲ್ಲದೆ ನನ್ನಲ್ಲಿ ವಾಸಮಾಡಿಕೊಂಡಿರುವದೆಂದರೆ ಪಾಮರತ್ವವು !

ಈ ಚಂದದ ನಾನು ಟ್ರೇನಿಂಗ ಕಾಲೇಜದಿಂದ ಹೊರಬಿದ್ದಬಳಿಕ ಹಳ್ಳಿಯ ಶಾಲೆಯ ಮಾಸ್ತರನಾಗಿ ಏಕನಿಷ್ಠೆಯಿಂದ ದುಡಿಯತೊಡಗಿದೆನು.

ಕೆಲಸವಲ್ಲಿ ನನ್ನ ಪ್ರೀತಿ ಹೆಚ್ಚು; ನನ್ನಿಷ್ಟಕ್ಕೆ ನಾನಿರುವದರಲ್ಲಿ ನನ್ನ ಆಸಕ್ತಿ ಬಹಳ; ಕೆಲಸಬಿಟ್ಟು ಸಿಕ್ಕಾಗ ಸಿಕ್ಕತ್ತ ಸುಮ್ಮನೆ ಎಡತಾಕುವ ಚಾಳಿಯಂತು ನನಗೆ ಗೊತ್ತೇ ಇಲ್ಲ. ನಾನಾಯಿತು, ನನ್ನ ಕೆಲಸವಾಯಿತು ಎಂಬ ಚಂದದಿಂದ ನಡೆಯುವ ಮನುಷ್ಯನು ನಾನು. ಏನಾದರೂ ಹೊತ್ತುಸಿಕ್ಕರೆ ನನ್ನ ಯೋಗ್ಯತೆಯು ಸಾಮಾನ್ಯ ಜನರೇ ಮನಮೆಚ್ಚಿ ಓದುವಂತಹ ಪುಸ್ತಕಗಳನ್ನು ಬರೆದರೆ ಬರೆಯುವೆನು. ನನ್ನ ಅನುಭವವನ್ನು ಮೀರದಿರುವ, ಬಹಳವಾದರೆ ಸ್ವಲ್ಪಕಾಲು ಎತ್ತರಿಸಿದಾಗ ನನ್ನ ಅನುಭವಕ್ಕೆ ನಿಲಕಬಹುದಾದಂತಹ ವಿಷಯಗಳನ್ನಲ್ಲದೆ, ಹೆಚ್ಚು ಗಹನವಾದ ವಿಷಯಗಳನ್ನು ನಾನು ಬರೆದವನಲ್ಲ, ಈಗಲೂ ಬರೆಯುವದಿಲ್ಲ! ಯಾಕಂದರೆ ಅಂತಹ ಘನವಾದ ಅನುಭವವೇ ನನಗಿರುವದಿಲ್ಲ! ಅಂದಬಳಿಕ ಸಾಮಾನ್ಯ ಜನರಲ್ಲಿ ಒಬ್ಬನಾಗಿರುವ ನಾನು ಬರೆದ ನನ್ನ ಅನುಭವದ ಸವಿಯಾದ ಸುಲಭ ಲೇಖಗಳನ್ನು, ನನಗೆ ಸಮಾನಧರ್ಮಿಗಳಾದ ಸಾಮಾನ್ಯ ಜನರು ಯಾಕೆ ಪ್ರೀತಿಯಿಂದ ಓದದೆ ಬಿಟ್ಟಾರು ? ಅಂತಹ ನನ್ನ ಆ ಲೇಖಗಳು ಸಾಮಾನ್ಯ ಜನರನ್ನು ಸಂತೋಷಪಡಿಸದೆಯಾದರೂ ಯಾಕೆ ಬಿಟ್ಟಾವು? ಒಟ್ಟಿಗೆ, ನಾನು ನನ್ನ ಜೀವನಾಧಾರವಾದ ಶಿಕ್ಷಣದಕೆಲಸವನ್ನು ನಿರ್ವಂಚನೆಯಿಂದ ಮನಸ್ಸಿಗೆ ಹಚ್ಚಿಕೊಂಡು ಮಾಡುತ್ತ, ನನ್ನ ಮನಸ್ಸನ್ನು ರಮಿಸುವ ವಿಷಯಗಳನ್ನಾಗಲಿ, ನನ್ನ ಮನಸ್ಸನ್ನು ಸಮಾಧಾನಪಡಿಸುವ ವಿಷಯಗಳನ್ನಾಗಲಿ ಹೊತ್ತುಸಿಕ್ಕರೆ ನಿರ್ವಂಚನೆಯಿಂದ ಮನಃಪೂರ್ವಕವಾಗಿ ಅನುಭವವನ್ನು ಮುಂದೆಮಾಡಿ ಬರೆಯುತ್ತ ಯಾವಾಗ ಸಮಾಧಾನದಿಂದ, ಯಾವಾಗ ಅಸಮಾಧಾನದಿಂದ ಕಾಲಹರಣಮಾಡತೊಡಗಿದೆನು.

ಈ ಬಗೆಯ ಸಂಕುಚಿತ ಕಾರ್ಯಕ್ಷೇತ್ರದಲ್ಲಿ ಕಾಲಕ್ಷೇಪಮಾಡುವ ಬಡವನು ನಾನು, ಪ್ರತಿತಿಂಗಳ ಹದಿನೈದು ರೂಪಾಯಿಗಳ ತಲಬಿನಿಂದ ಮೂವತ್ತು ರೂಪಾಯಿ ತಲಬಿನವರೆಗೆ ಏರುತ್ತ ಏರುತ್ತ, ಮುಖ್ಯ ಶಿಕ್ಷಕನಾಗಿಯೇ ಸಣ್ಣಹಳ್ಳಿಯಿಂದ ದೊಡ್ಡಹಳ್ಳಿಗೆ ವರ್ಗವಾಗಿ ಹೋಗುತ್ತಹೋಗುತ್ತ ಕಡೆಗೆ ನಲವತ್ತೈದು ರೂಪಾಯಿ ತಲಬಿನಿಂದ ಟ್ರೇನಿಂಗ್ ಕಾಲೇಜದ ಕನ್ನಡ ಉಪಶಿಕ್ಷಕನಾದೆನು. ಮುಂದೆ ಒಂದೆರಡು ತಿಂಗಳೊಳಗೆ ಅಲ್ಲಿ ತಿಂಗಳಿಗೆ

ಐವತ್ತು ರೂಪಾಯಿಗಳು ದೊರೆಯಹತ್ತಲು, ನನ್ನಂತಹ ಧನ್ಯನು ನಾನೇ ಎಂದು ಅಭಿಮಾನಪಡತೊಡಗಿದೆನು. ಪಾಪ! ಬಡವರ ಅಲ್ಪ ಸಂತುಷ್ಟತೆ! ಈ ಅವಧಿಯಲ್ಲಿ ನನ್ನಿಂದ "ಪದ್ಮನಯನೆ" ಎಂಬ ಕಾದಂಬರಿಯು, "ಲಘುನಿಬಂಧ-ಸಂಗ್ರಹ" ಎಂಬ ಪ್ರಬಂಧ-ಶಿಕ್ಷಣದ ಪುಸ್ತಕವು, "ಉತ್ತರರಾಮ ಚರಿತ್ರಸಾರ" "ಶ್ರೀ ಗಿರಿಜಾಕಲ್ಯಾಣ" ಎಂಬವೆರಡು ಪೌರಾಣಿಕ ಸಣ್ಣ ಪುಸ್ತಕಗಳು ಬೈಲಿಗೆ ಬೀಳಲು, "ಗಳಗನಾಥನು ನೆಟ್ಟಗೆ ಬರೆಯುವನೆಂ"ದು ಜನರು ಅನ್ನಹತ್ತಿದರು. ಈ ಅವಧಿಯಲ್ಲಿ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರತಿವರ್ಷದ ಉತ್ಸವದ ಕಾಲಕ್ಕೆ, ಅಧ್ಯಕ್ಷರಾಗಿರುತ್ತಿದ್ದ ಬಹುತರ ನಮ್ಮ ಮೈಸೂರ ಸನ್ಮಾನ್ಯ ವಿದ್ವಾಂಸರಾದ ಪದವೀಧರರ ಕೈಯಿಂದಲೇ ಒಂದು ವರ್ಷವೂ ತಪ್ಪದಂತೆ ೯-೧೦ ವರ್ಷ ಲೇಖನ ಭಾಷಣಗಳ ಪರೀಕ್ಷೆಯಲ್ಲಿ ನಾನು ಉಚಿತಗಳನ್ನು ಪಡೆದದ್ದರಿಂದ ನನಗೆ "ಪಂಢರಪುರದ ವಾರಕರಿ" ಎಂದು ಆ ಸಂಘದವರು ವಿನೋದದಿಂದ ಅನ್ನುತ್ತಿದ್ದರು.

ಹೀಗೆ ನಾನು ಹಳ್ಳಿಯ ಸಣ್ಣ ಶಾಲೆಯಿಂದ ಟ್ರೇನಿಂಗ ಕಾಲೇಜದಂಥ ಗೌರವದ ಶಾಲೆಯವರೆಗೆ ಸಣ್ಣ ದೊಡ್ಡ ಶಾಲೆಗಳಲ್ಲಿ ಮನಃಪೂರ್ವಕ ಕೆಲಸ ಮಾಡುತ್ತ, ಪ್ರೀತಿಬಂದ ವಿಷಯಗಳನ್ನು ಬರೆಯುತ್ತ, ಸಂಘದ ಪಾರಿತೋಷಕಗಳಿಂದ ಉತ್ತೇಜನವನ್ನು ಹೊಂದುತ್ತ ಅಭಿಮಾನದಿಂದ ಕಾಲಹರಣ ಮಾಡುತ್ತಿರುವಾಗ, ನನ್ನ ನೌಕರಿಯ ಮುದ್ದತ್ತು ಇಪ್ಪತ್ತು ವರ್ಷದ್ದಾಯಿತು. ನನ್ನ ಕೆಲಸದ ಬಗ್ಗೆ ನನ್ನ ಪೂಜ್ಯಗುರುಗಳಾದ ಕೈ. ವಾ. ರಾವಜಿರಾವ ಕರಂದಿಕರ ಪ್ರಿನ್ಸಿಪಾಲ ಟ್ರೇನಿಂಗ್ ಕಾಲೇಜ ಧಾರವಾಡರವರು "ಗಳಗನಾಥನು ಸಮರ್ಥ ಶಿಕ್ಷಕನು, ಗೊತ್ತಿದ್ದ ವಿಷಯವನ್ನು ಸವಿಯಾಗಿ ಬರೆಯುವವನು" ಎಂದು ಅನ್ನುತ್ತಿದ್ದರು! ಈ ಮಹನೀಯರೇ, ಪೂನಾದ ರಿವಿಜನಲ್ ಟೆಕ್ಸ್ಟ ಬುಕ್‌ಕಮಿಟಿಯಲ್ಲಿ ನನ್ನನ್ನು ಮೈಮುರಿಯ ದುಡಿಸಿ, ನನಗೆ ಲೇಖನ ಕಲೆಯ ಹಿಡತಗಳು ತಿಳಿಯಲಿಕ್ಕೆ ಆಸ್ಪದಮಾಡಿಕೊಟ್ಟವರು. ನನ್ನ ಈ ತೇಜಸ್ವಿಗಳಾದ ಲೌಕಿಕ ಗುರುವರ್ಯರ ಸಹವಾಸವೂ, ಅವರ ಪ್ರಸನ್ನ ವಾಣಿಯ ಅಭಿಪ್ರಾಯವೂ ಈಗಲೂ ನನಗೆ ಸಂಜೀವನ

ಮಂತ್ರಗಳಾಗಿ ನನ್ನಲ್ಲಿ ಕಾರ್ಯೋತ್ಸಾಹವನ್ನುಂಟುಮಾಡುತ್ತಿರುವವು ಹೀಗೆಯೇ ನಾನು ಇನ್ನು ಎರಡು ವರ್ಷ ಟ್ರೇನಿಂಗ್ ಕಾಲೇಜದ ಶಿಕ್ಷಕನಾಗಿದ್ದರೆ, ನನಗೆ ತಿಂಗಳಿಗೆ ಒಂದುನೂರು ರೂಪಾಯಿ ಸಂಬಳವಾದರೂ ಆಗಿ, ನಾನೊಬ್ಬ ಗಣ್ಯಪುರುಷನಾಗುತ್ತಿದ್ದೆನು; ಯಾಕಂದರೆ, ದುಡ್ಡಿನಿಂದಲೇ ಮನುಷ್ಯನ ಯೋಗ್ಯತೆಯನ್ನು ಅಳೆಯುವ ಕಾಲವಿದು! ಆದರೆ ನನ್ನ ಏಕನಿಷ್ಠೆಯ ಪರಿಶ್ರಮಕ್ಕೆ ಅಷ್ಟು ಪ್ರತಿಫಲವು ದೊರೆಯುವ ಯೋಗವಿದ್ದಿಲ್ಲ; ಯಾಕಂದರೆ ನಾನು ಅಕಸ್ಮಾತ್ ಮೊದಲು ಒಂದು ವರ್ಷದ ಫರ್ಲೋ ರಜೆಯನ್ನೂ, ಆಮೇಲೆ ಒಂದು ವರ್ಷದ ಸೀಕ್ ರಜೆಯನ್ನೂ ಭೋಗಿಸಿ, ಇನ್ನೂ ಹತ್ತು ವರ್ಷದ ನೌಕರಿಯ ಮುದ್ದತ್ತು ಇರುತ್ತಿರುವಾಗ ಪ್ರಯತ್ನಪೂರ್ವಕ ಪೆನಶನ್ನು ಪಡೆದೆನು. ಈಗ ನನಗೆ ತಿಂಗಳಿಗೆ ಹತ್ತೊಂಭತ್ತು ರೂಪಾಯಿ, ಆರು ಆಣೆ ಪೆನಶನ್ನು ದೊರೆಯುತ್ತಿರುವದು.

---

## ೨ ನನ್ನ ಸದ್ಗುರುವು!

ಹೀಗೆ ಲಾಭಕಾಲದಲ್ಲಿ ನಾನು ಪೆನಶನ್ನು ಪಡೆದದ್ದಕ್ಕಾಗಿ ಒಬ್ಬರಿಲ್ಲೊಬ್ಬರಾದರೂ ಶಂಕಿಸಬಹುದಾಗಿದೆ; .ಆದರೆ ನಾನು ಮಾಡುತ್ತಿದ್ದ ಅಧ್ಯಾಪಕ ಕೆಲಸದಲ್ಲಿ ಬೇಸರಮಾಡಿಯಾಗಲಿ, "ಇದರಲ್ಲೇನು ಲಾಭವಿಲ್ಲೆಂ"ಬ ಅಸಂತುಷ್ಟತೆಯಿಂದಾಗಲಿ, "ಅಚ್ಚು ಲೇಖಕನಾಗಿ ಸ್ವತಂತ್ರನೂ-ದುಡ್ಡು ಗಳಿಸುವವನೂ ಎನಿಸಿಕೊಳ್ಳಬೇಕೆಂ"ಬ ಡೌಲಿನಿಂದಾಗಲಿ, "ದೇಶಭಕ್ತನೆನಿಸಿಕೊಳ್ಳಬೇಕೆಂ"ಬ ಉಬ್ಬಿನಿಂದಾಗಲಿ ನಾನು ನೌಕರಿಯನ್ನು ಬಿಟ್ಟವನಲ್ಲ; ಆದರೆ ಅಷ್ಟುಹೊತ್ತಿಗೆ ಮೂರು ನಾಲ್ಕು ವರ್ಷಗಳಿಂದ ಆಗಡಿಯ ಆನಂದವನಸ್ಥ ಶ್ರೀ ಶೇಷಾಚಲ ಸಾಧುಗಳವರ ಸತ್ಸಹವಾಸವು ನನಗೆ ಒದಗಿ, ಆನಂದವನದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದ ಉಪಾಧಿಯ ಬಾಧೆಗೆ ಅಹಂಕಾರದಿಂದ ನಾನು ಒಳಗಾಗಿದ್ದೆನು. ಆ ಪಾಠಶಾಲೆಯ ಯೋಗಕ್ಷೇಮಕ್ಕಾಗಿ ನಾನು ಆರಂಭಿಸಿದ್ದ "ಸದ್ಬೋಧಚಂದ್ರಿಕೆ" ಎಂಬ ಮಾಸಪತ್ರಿಕೆಯನ್ನು ಸಾಗಿಸುವದಕ್ಕೂ, ಪಾಠಶಾಲೆಯನ್ನು ನನ್ನ



ಶಿಷ್ಯವರ್ಯ-ಗುರುಸ್ವರೂಪ-ಶ್ರೀ ನಾರಾಯಣ ಭಗವಾನರು.

ಸ್ವಭಾವಕ್ಕನುಸರಿಸಿ ನಡಿಸಲಿಕ್ಕೂ ನನ್ನ ನೌಕರಿಯು ವಿಘ್ನಮಾಡತೊಡಗಿತು. ಹೀಗೆ ಎರಡು ಪ್ರಬಲ ಉಪಾಧಿಗಳ ಇರುಕಿನಲ್ಲಿ ಸಿಕ್ಕ ನಾನು, ಯಾವದೊಂದು ಉಪಾಧಿಯಿಂದ ಮುಕ್ತನಾಗದಿದ್ದರೆ ಪರಿಣಾಮವಾಗುವ ಹಾಗಿದ್ದಿಲ್ಲ. ಹೀಗಿರುವಾಗ ನನ್ನ ಹಿರಿಯರ ಪುಣ್ಯದಿಂದಲೂ, ಶ್ರೀ ಲಕ್ಷ್ಮೀಪತಿಯ ಕೃಪೆಯಿಂದಲೂ ನಾನು ನೌಕರಿಯ ಉಪಾಧಿಯಿಂದ ಮುಕ್ತನಾಗಿ, ಮಹಾಪುರುಷ-ಸಂಶ್ರಯದ ಭಾಗ್ಯವನ್ನು ಪಡೆದೆನು ! ಈ ಭಾಗ್ಯಪ್ರಾಪ್ತಿಯ ಮಂಗಲ ಕಾಲವು ನನಗೆ ಒದಗಬಾರದಿದ್ದರೆ, ಅಂದಿನಿಂದ ಇಂದಿನವರೆಗೆಯೆಂದರೆ ಇಪ್ಪತ್ತೈದು ವರ್ಷ ಅಖಂಡ ಭಾಷಾಸೇವೆ ಮಾಡಿದ ನಾನು, ಕಲ್ಯಾಣಪುರಿಯೆನಿಸುವ ಬೆಂಗಳೂರಂತಹ ದೊಡ್ಡ ಪಟ್ಟಣದೊಳಗಿನ ದೊಡ್ಡದೊಡ್ಡ ವಿದ್ವಾಂಸರ ದರ್ಶನದಿಂದ ಧನ್ಯನಾಗಿ, ಇನ್ನು ಇಲ್ಲಿ ಬೆಂಗಳೂರಲ್ಲಿಯೇ ಇದ್ದು ಲೇಖನ ವ್ಯವಸಾಯವನ್ನು ಸಾಗಿಸಬೇಕೆಂಬ ಉತ್ಸಾಹದಿಂದ ಶ್ರೀಮನ್ನಾಲ್ವಡಿ ಕೃಷ್ಣನ ಪುಣ್ಯಭೂಮಿಯಲ್ಲಿ ನಾಲ್ಕಯ್ದು ತಿಂಗಳಿನಿಂದ ಇದ್ದುಬಿಡುವಷ್ಟು ಭಾಗ್ಯವಂತನು ಆಗುತ್ತಿದ್ದಿಲ್ಲ ! ಸದ್ಗುರು ಪ್ರಭಾವಕ್ಕೆ ಯಾವದು ತಾನೆ ಅಸಾಧ್ಯವು ?

ಹೀಗೆ ನನ್ನ ಧನ್ಯತೆಗೆ ಕಾರಣನಾದ ಅಲೌಕಿಕ ಮಹಿಮೆಯು, ಹಾಗು ಅಗಾಧಸತ್ವದ ಅಗಡಿ ಆನಂದವನಸ್ಥ ಶ್ರೀ ಶೇಷಸದ್ಗುರುನಾಥನು, ನನ್ನ ಹಾಗೆಯೇ ಗಾವಿಲನು ! ಆತನ ಗೋತ್ರವೂ ಕೌಂಡಿಣ್ಯ ; ಆತನೂ ಶುಕ್ಲಯಜುರ್ವೇದಾಂತರ್ಗತ ಕಣ್ವಶಾಖೆಯ ಸ್ಮಾರ್ತ ಬ್ರಾಹ್ಮಣನು. ಲೌಕಿಕ ಯೋಗ್ಯತೆಯಲ್ಲಿಯೂ, ಓದು-ಬರಹದಲ್ಲಿಯೂ, ಕೆಲಸ-ಕೈಗಾರಿಕೆಗಳಲ್ಲಿಯೂ ನಮ್ಮಿಬ್ಬರು ಗುರುಶಿಷ್ಯರನ್ನು ಒರೆಗೆ ಹಚ್ಚಿ ನೋಡಿದರೆ, ಶಿಷ್ಯನಾದ ನಾನೇ ನನ್ನ ಗುರುವಿಗಿಂತ ಶ್ರೇಷ್ಠನು ! ಆದರೆ ಕೇವಲ ನನ್ನಂತಹ ಮೂಢಜನರ ಉದ್ಧಾರಕ್ಕಾಗಿ ಅವತರಿಸಿ, ಮೂಢರಿಗಿಂತಲೂ ಮೂಢನಾಗಿ ತೋರುತ್ತ, ಅಡ್ಡಹಾದಿಗೆ ಹೋಗುತ್ತಿರುವ ಶಿಷ್ಯರನ್ನು ಅವರಿಗೆ ತಿಳಿಯದಂತೆ ಹಾದಿಗೆ ಹಚ್ಚಲು ಸಮರ್ಥನಾದ ದೀನರಕ್ಷಕ-ಪತಿತಪಾವನ ಸದ್ಗುರುನಾಥನು, ನನ್ನ ಶ್ರೀ ಶೇಷಸದ್ಗುರುನಾಥನಿಗಿಂತಲೂ ಹೆಚ್ಚಿನವನು ಈ ಜಗತ್ತಿನಲ್ಲಿ ಮತ್ತಾವನಿರುವನು? ಅಥವಾ ಈ ಜಗತ್ತೆಲ್ಲ ಗುರುಸ್ವರೂಪವೇ ಆಗಿರುವದೆಂಬ ನನ್ನ

ಸದ್ಗುರುನಾಥನ ಮಾತಿನ ಅನುಭವವನ್ನು ಪಡೆಯುವದಕ್ಕಾಗಿ, ಆ ಮಹಾಮಹಿಮನ ನಡತೆಯನ್ನು ನೆನಿಸಿ ನೆನಿಸಿ ಪಶ್ಚಾತ್ತಾಪದಿಂದ ನಾನು ಯತ್ನಿಸುತ್ತಿರುವಾಗ, ಜಗತ್ತಿನಲ್ಲಿ ನನ್ನ ಸದ್ಗುರುನಾಥನಿಗಿಂತಲೂ ಹೆಚ್ಚಿನವರಾಗಲಿ, ಕಡಿಮೆಯವರಾಗಲಿ ನನಗೆ ತೋರುತ್ತಿರುವವರೆಗೆ ನಾನು ಧನ್ಯನಾದೆನೆಂದಾದರೂ ಹೇಗೆ ತಿಳಿದುಕೊಳ್ಳಬೇಕು?

ನನ್ನ ಈ ಗಾವಿಲನಾದ ಶ್ರೀ ಸದ್ಗುರುನಾಥನು ಅತ್ಯಂತ ಗಂಭೀರನು; ನನ್ನಂತಹ ಪಾಮರನನ್ನೂ ಅಂಗೀಕರಿಸಿ ಆದರಿಸುವಷ್ಟು ಉದಾರನು-ಕರುಣಾಶಾಲಿಯು; ಆತನು ಜಗತ್ತನ್ನೇ ಈಶ್ವರಸ್ವರೂಪವಾಗಿ ನೋಡಿ ದಾಸಾನುದಾಸನಾಗಿ ಸೇವಕವೃತ್ತಿಯಿಂದ ನಡೆದುಕೊಳ್ಳುವವನು; ಬ್ರಾಹ್ಮಣರಿಂದ ಚಂಡಾಲರವರೆಗೆ ತಲೆಬಾಗಿ-ತಲೆಬಾಗಿ, ನಮಿಸಿ-ನಮಿಸಿ ಈಗಿನ ಅಹಂಕಾರಾವೃತ ಜಗತ್ತಿಗೆ ದಾಸಭಾವದ ಸೊಬಗನ್ನು ತೋರಿಸುವವನು; ಸದ್ವೃತ್ತಿಸ್ವರೂಪದ ತಾನು ಸ್ವಯಂಸಿದ್ಧ ರಾಜಾಧಿರಾಜನಾಗಿದ್ದರೂ, ಅನ್ಯರಿಗೆ "ಮಹಾರಾಜಾ, ಮಹಾರಾಜಾ" ಎಂಬ ವಿನಯೋಕ್ತಿಯಿಂದ ಸಂಬೋಧಿಸಿ, ಜನರ ಮಾನಸಿಕ ವಿಕಾರಗಳನ್ನು ಕುಗ್ಗಬಡಿದು ಕ್ಷಣದಲ್ಲಿ ಜನರ ಮನಸ್ಸನ್ನು ಶಾಂತಗೊಳಿಸಿ ಅವರನ್ನು ಆನಂದಭಾಜನರನ್ನಾಗಮಾಡುವವನು; ನನ್ನ ಈ ಆನಂದವನವು ಭುಕ್ತಿ-ಮುಕ್ತಿಗಳ ನೆಲೆಗಟ್ಟೆಂದು ತನ್ನ ಸರ್ವವ್ಯಾಪಕ ಸೇವಾಧರ್ಮ-ಸುಲಭ ಸದ್ಬೋಧಗಳಿಂದ ಡಂಗುರಹೊಡೆದು ವಿವೇಕಿಗಳನ್ನು ಎಚ್ಚರಗೊಳಿಸುತ್ತ, ಸಾತ್ವಿಕರೀತಿಯಿಂದ ಲೋಕಸಂಗ್ರಹವನ್ನು ಮಾಡುವವನು; ನನ್ನಂತಹ ಪತಿತರಿಗಿಂತಲೂ ಪತಿತನಾಗಿ ಗಾಂಭೀರ್ಯದಿಂದ ನಡೆದುಕೊಂಡು ಪತಿತ ಶಿಕ್ಷಕಾಗ್ರೇಸರನಾಗಿ ಲೌಕಿಕರಿಗೆ ತನ್ನ ನೆಲೆಯನ್ನು ತಿಳಿಯಗೊಡದೆ ಮಿಂಚಿಹೋಗಿ ಮುಮುಕ್ಷುಗಳಿಗೆ ಪಶ್ಚಾತ್ತಾಪವನ್ನುಂಟುಮಾಡಿದವನು! ಇಂಥ ನನ್ನ ಸದ್ಗುರುನಾಥನ ಅಗಾಧ ಮಹಿಮೆಯನ್ನು ವರ್ಣಿಸಲು ನಾನು ಹೇಗೆ ಸಮರ್ಥನಾದೇನು? ಆ ಮಹಾಮಹಿಮನನ್ನು ನಮಸ್ಕರಿಸುವ ಯೋಗ್ಯತೆಯಾದರೂ ನನ್ನಲ್ಲಿ ಇರುವದೆಯೇ?

ಇಂತಹ ಸದ್ಗುರುನಾಥನ ಆನಂದವನವೆಂಬ ಪವಿತ್ರತರ ತಪೋಭೂಮಿಯಲ್ಲಿ ಅಹಂಕಾರಿಯು ನಾನು, ಸದ್ಗುರುನಾಥನ ಶಿಷ್ಯನೆಂಬ ಮಹಾ

ಹಂಕಾರದಿಂದ ಬಾಧಿತನಾಗಿ, ಅಖಂಡ ಹದಿಮೂರು ಹದಿನಾಲ್ಕು ವರ್ಷ ಸಕುಟುಂಬ ಸಪರಿವಾರ ವಾಸಿಸಿ ಏನೇನೋ ಕೆಲಸಗಳನ್ನು ಮಾಡಿಬಿಟ್ಟೆನು! ನನ್ನ ಅಕ್ಕರೆಯ ಸದ್ಬೋಧ ಚಂದ್ರಿಕೆಯೆಂಬ ಮಾಸಪತ್ರಿಕೆಯು ಸದ್ಗುರು ನಾಥನ ಕೃಪೆಯಿಂದ ನನ್ನ ಜ್ಯೇಷ್ಠ ಪುತ್ರಿಯಂತೆ ಆನಂದವನದಲ್ಲಿ ಹುಟ್ಟಿ ದಳು. ಆಕೆಯು ತನ್ನ ತೊದಲು ನುಡಿಯ ಸವಿಯ, ಹಾಗು ತನ್ನ ಕಿರಿ ಗೆಜ್ಜೆಗಳ ಇಂಚರದ ರೂಪದಿಂದ ಕರ್ನಾಟಕದ ಪ್ರದೇಶವನ್ನೆಲ್ಲ ಆಕ್ರಮಿ ಸುತ್ತ ಆಕ್ರಮಿಸುತ್ತ ಹನ್ನೆರಡು ವರ್ಷಗಳಲ್ಲಿ ಕಾಶಿಯಿಂದ ರಾಮೇಶ್ವರದವರೆ ಗಿಷ್ಟೇ ಅಲ್ಲ, ಏಡನದಂತಹ ಭರತಭೂಮಿಯ ಹೊರಭಾಗದಲ್ಲಿಯೂ ಇರುವ ಕನ್ನಡಿಗರಲ್ಲಿಯು ಏಳುಸಹಸ್ರ ಜನ ಚಂದಾದಾರರ ಮನಸ್ಸುಗಳನ್ನು ಎಳೆದು ಕೊಂಡು, ತನ್ನ ಸವಿಯಾದ ಗೌರವದ ನುಡಿಗಳಿಂದ ಅವರನ್ನು ಆನಂದಪರ ವಶರಾಗಮಾಡಿ "ಅಹಹ! ಸದ್ಬೋಧಚಂದ್ರಿಕೆಯು!" ಎಂಬ ಉದ್ಗಾರ ವನ್ನು ಹೊರಡಿಸಿದಳು! ಇಂತಹ ಸತ್ಪುತ್ರಿಯ ಭಾಗ್ಯವನ್ನು ನಾನು ಭೋಗಿಸಿ ದ್ದಲ್ಲದೆ, ಹಿಂದಕ್ಕೆ ಟ್ರೇನಿಂಗ್ ಕಾಲೇಜಿನಲ್ಲಿ ೯೧ ಜನ ವಿದ್ಯಾರ್ಥಿಗಳಲ್ಲ ಒಬ್ಬನಾಗಿ ಅಲ್ಲಿಯ ಬ್ರಾಹ್ಮಣ ಭೋಜನ ಗೃಹದಲ್ಲಿ ಭುಂಜಿಸುತ್ತ ಅಲ್ಲಿಯ ವಿದ್ಯಾ ಮಂದಿರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ನಾನು, ನನ್ನ ಸದ್ಗುರು ನಾಥನ ಪ್ರಭಾವದಿಂದ ಆನಂದವನದಲ್ಲಿ ಚತುಃಶಾಖೆಯ ಬ್ರಾಹ್ಮಣರ ಎಂಬತ್ತುಜನ ವಿದ್ಯಾರ್ಥಿಗಳಿಗೆ ಅನ್ನ ವಸ್ತ್ರಗಳನ್ನು ಕೊಟ್ಟು, ವೇದ-ಯಾಜ್ಞಿಕ,-ಕಾವ್ಯ,-ಶಾಸ್ತ್ರಗಳ ಅಧ್ಯಾಪನ ಮಾಡಿಸುವ ಎಂಟುಜನ ಅಧ್ಯಾ ಪಕರ ಅನುಗ್ರಹಕ್ಕೆ ಪಾತ್ರನಾದ ಪುಣ್ಯವಂತನೆಂಬ ಅಹಂಕಾರದಿಂದ ಮೆರೆದೆನು! ಪೂಜ್ಯರೇ, ಸದ್ಗುರುನಾಥನ ಬಾಗಿಲು ಕಾಯುವ ನಮ್ಮ ನಾಯಿಗಳ ಈ ಭಾಗ್ಯದ ಭೋಗವನ್ನೂ, ಅಹಂಕಾರದ ಮೆರವಣಿಗೆಯನ್ನೂ ನೋಡಿ ನೀವು ಆಶ್ಚರ್ಯಪಡುವಿರೇನು? ಅಥವಾ ಈ ಗಳಗನಾಥನು ಎಂತಹ ಆತ್ಮಶ್ಲಾಘಿಯೆಂದು ಅಸಹ್ಯಪಡುವಿರೋ? ಆದರೆ, ಹೀಗೆ ನೀವು ಆಶ್ಚರ್ಯ-ಅಸಹ್ಯಗಳ ವಿಕಾರಕ್ಕೆ ಒಳಗಾಗದೆ, ಅಹಂಕಾರವು ಪಾಮರರ ಸ್ವಭಾವಗುಣ ವೆಂದು ತಿಳಿದು ಕರುಣಾಳುಗಳಾಗಿ, ನನ್ನ ಸದ್ಗುರುನಾಥನಂತೆ ನೀವೂ ನನ್ನನ್ನು ಅನುಗ್ರಹಿಸಿ ಧನ್ಯನಾಗಮಾಡುವಿರೆಂದು ನಾನು ತಿಳಿದಿರುವೆನು;

ಯಾಕಂದರೆ, ತನ್ನ ಕಾರ್ಯದಲ್ಲಿಯ ಅಹಂಕಾರವು ತನ್ನ ಬಂಧನಕ್ಕೆ ಕಾರಣವಾಗಿರುವಂತೆ, ಶ್ರೀ ಗುರುವಿನ ಕಾರ್ಯದಲ್ಲಿಯ ಅಹಂಕಾರವು ತನ್ನ ಮೋಕ್ಷಕ್ಕೆ ಕಾರಣವಾಗಿರುವದೆಂದು ನಾನು ಕಲ್ಪಿಸಿಕೊಂಡಿರುವೆನು. ನನ್ನ ಸದ್ಗುರುನಾಥನು ಒಮ್ಮೆ ನನ್ನನ್ನು ಕುರಿತು ವಾತ್ಸಲ್ಯದಿಂದ—"ಮಹಾರಾಜಾ, ಸ್ವಾಮಿಯ ಸಂಸಾರವು ನಿಮ್ಮ ಸಂಸಾರವು ಅಹುದಷ್ಟೆ?" ಎಂದು ಕೈಹಿಡಿದು ಕೇಳಲು, ಕಂಪಿತಹೃದಯದಿಂದ—"ಹೌದು" ಎಂದು ನಾನು ಉತ್ತರಕೊಟ್ಟೆನು! ಆಗ ಕರುಣಾಘನನಾದ ನನ್ನ ಸದ್ಗುರುನಾಥನು ಆನಂದದಿಂದ—"ಹೋಗಿರಿ ಮಹಾರಾಜಾ! ನಿಮ್ಮ ಸಂಸಾರವನ್ನು ಸ್ವಾಮಿಯು ತಲೆಯಲ್ಲಿ ಹೊತ್ತು ಮಾಡುವನು" ಎಂದು ಹೇಳಿದನು! ಮಹನೀಯರೇ, ಆ ಮಹಾ ಮಹಿಮನ ಈ ಮಾತಿನ ರಹಸ್ಯವನ್ನು ಪಾಮರನು ನಾನು ಏನು ತಿಳಿಯುವೆನು? ಮೇಲೆಹೇಳಿದಂತೆ ಗುರುಕಾರ್ಯದಲ್ಲಿಯ, ಅರ್ಥಾತ್ ಪರೋಪಕಾರದಲ್ಲಿಯ ಅಹಂಕಾರವು ತಾರಕವಾದದ್ದೆಂದಿಷ್ಟುಮಾತ್ರ ಹುಂಬಗುತ್ತಿಗೆಯಿಂದ ನಾನು ತಿಳಿದುಕೊಂಡು ಬಿಟ್ಟಿದ್ದೇನೆ! ಸನ್ಮಾನ್ಯರೇ, ಗುರುಕಾರ್ಯದಲ್ಲಿಯ ಅಹಂಕಾರವು ಮತ್ತೆ ಹುಟ್ಟಿ ಬರಲಾರದ ಹುರಿದಬೀಜವಂತಹ ಅಹಂಕಾರವಾಗಿರಬಹುದಲ್ಲವೆ?

ಹೀಗೆ ಆನಂದವನದಲ್ಲಿ ಸದ್ಬೋಧಚಂದ್ರಿಕೆಯ ಸೊಬಗಿನಲ್ಲಿಯೂ, ವೈದಿಕ ಪಾಠಶಾಲೆಯ ವೈಭವದಲ್ಲಿಯೂ ಒಮ್ಮೆ ಸುಖಪಡುತ್ತಾ, ಒಮ್ಮೆ ದುಃಖಪಡುತ್ತಾ ಆನಂದಪ್ರಾಪ್ತಿಗಾಗಿ ಹಂಬಲಿಸಿ ನಾನು ವ್ಯವಹರಿಸುತ್ತಿದ್ದಾಗ, ಶ್ರೀ ಸದ್ಗುರುನಾಥನ ನಿರ್ಯಾಣವಾಗಿ ಎರಡು ವರ್ಷಗಳಾದವು. ಆಗ ಏಳು ಸಹಸ್ರ ರೂಪಾಯಿ ಕೊಟ್ಟು ಸಂಗ್ರಹಿಸಿದ್ದ ಮುದ್ರಣದ ಸಾಧನಗಳಲ್ಲಿ ಮುಖ್ಯವಾದವನ್ನೂ, ಸದ್ಬೋಧ ಚಂದ್ರಿಕೆಯ ಮೇಲಿನ ಮಮಕಾರವನ್ನೂ ಬಿಟ್ಟು ಶ್ರೀ ಗುರುತಂತ್ರದಿಂದ ನಾನು ಪಾಠಶಾಲೆಯೊಡನೆ ಆನಂದವನದಿಂದ ಹಾನಗಲ್ಲಿಗೆ ಬರಬೇಕಾಯಿತು! ಮಹಾ ಯುದ್ಧದ ಕಾಲ, ರೂಪಾಯಿ ಕೊಟ್ಟರೆ ಎರಡು ಸೇರು ಕಾಳು, ಕೇಳಿದ ಪದಾರ್ಥಗಳಿಲ್ಲ ಮಿತಿಮೀರಿ ತುಟ್ಟಿ, ಪಾಠಶಾಲೆಯ ನಲವತ್ತು ಜನ ವಿದ್ಯಾರ್ಥಿಗಳ ಎರಡು ಹೊತ್ತಿನ ಊಟ, ಎಂಟುಜನ ಅಧ್ಯಾಪಕರ ಮಾಸಾಶನದ ಪ್ರತಿ ತಿಂಗಳ

ಸರಾಸರಿ ೨೦೦ ರೂಪಾಯಿ ವೆಚ್ಚ, ಪ್ರಿಂಟಿಂಗ್ ಪ್ರೇಸಿನ ನೌಕರರ ನೂರಾರು ರೂಪಾಯಿ ಪಗಾರ, ತನ್ಮಧ್ಯೇ ಎಂಟು ಸಹಸ್ರ ರೂಪಾಯಿ ಕೊಟ್ಟು ಮುದ್ರಣದ ಸಾಧನಗಳನ್ನು ಕೊಳ್ಳುವ ಪ್ರಸಂಗ, ಇವೆಲ್ಲ ತೊಂದರೆ ಗಳ ತಿಕ್ಕಾಟದಲ್ಲಿ ನನ್ನ ಇಬ್ಬರು ಹೆಣ್ಣು ಮಕ್ಕಳ ಸಾಲಂಕೃತ ಕನ್ಯಾ ದಾನದ ಸುಯೋಗ! ಅಂದಬಳಿಕ ಕೇಳುವದೇನು ? ಹೊಳೆಯ ನೀರು ಏರಿ ದಂತೆ ಗಳಗನಾಥನ ಸಾಲವು ಭರದಿಂದ ಏರತೊಡಗಿ, ಹದಿನಾಲ್ಕು ಸಾವಿರ ರೂಪಾಯಿಗಳ ವರೆಗೆ ಅದು ಏರಿತು! ಅಷ್ಟುಹೊತ್ತಿಗೆ ಗಳಗನಾಥನ ಲೇಖನ ವ್ಯವಸಾಯದಿಂದ ಅರವತ್ತು ಸಹಸ್ರ ರೂಪಾಯಿಗಳ ಸಂಪಾದನವಾಗಿ, ಆ ಸಂಪಾದನದ ಬಹು ದೊಡ್ಡ ಭಾಗವು ವೈದಿಕ ಪಾಠಶಾಲೆ- ಗೋ ಶಾಲೆಗಳಿ ಗಾಗಿ ವೆಚ್ಚವಾಗಿ ಹೋಗಿದ್ದಿತು !

ಈ ದೀರ್ಘ ವೆಚ್ಚಕ್ಕಾಗಿ ಗಳಗನಾಥನು ಅಸೂಯೆಪಟ್ಟಿದ್ದಿಲ್ಲ; ಅಥವಾ ನೀಗದಷ್ಟು ಸಾಲವಾದದ್ದಕ್ಕಾಗಿ ಆತನು ಎದೆಗುಂದಿದ್ದಿಲ್ಲ; ಆತನ ಪಾಠ ಶಾಲೆ-ಸದ್ಗುರು ಮಾಸಪತ್ರಿಕೆಗಳು ಸಾಗುವಹಾಗೆ ಹಾವೇರಿಯಲ್ಲಿ ಸಾಗಿದ್ದವು; ಆದರೆ ಗಳಗನಾಥನ ಸತ್ವಪರೀಕ್ಷೆಗಾಗಿಯೋ ಅನ್ನುವಂತೆ, ಸಂಸ್ಕೃತ ಪಾಠ ಶಾಲೆಯು ಈಗ ನಾಲ್ಕು ವರ್ಷಗಳ ಹಿಂದೆ ಆಕಸ್ಮಾತ್ ನಿಂತುಬಿಟ್ಟಿತು. ಆಗ ಮಾತ್ರ ಗಳಗನಾಥನಿಗೆ ಪರಮಾವಧಿ ದುಃಖವಾಯಿತು ! ಯಾಕಂದರೆ, ಪಾಠಶಾಲೆಯನ್ನು ತನ್ನ ಗುರುಸೇವೆಯ ಮುಖ್ಯಾಂಗವೆಂದು ಆತನು ತಿಳಿದಿ ರುವನು. ಹೀಗಿರಲು, ಸದ್ಗುರು ಪ್ರಭಾವದಿಂದ ಆತನು ಕರ್ತವ್ಯಭ್ರಷ್ಟ ನಾಗದೆ, ಅನಿರ್ವಾಹಪಕ್ಷ ಸದ್ಗುರು ಮಾಸಪತ್ರಿಕೆಯನ್ನು ನಿಲ್ಲಿಸಿ, ತನ್ನಲ್ಲಿ ಸಂಗ್ರಹವಾಗಿದ್ದ ನಾಲ್ವತ್ತು ಸಹಸ್ರ ರೂಪಾಯಿಗಳ ಪುಸ್ತಕಗಳನ್ನು ಮಾರಿ ಸಾಲತೀರಿಸಿ ಆಮೇಲೆ ಪಾಠಶಾಲೆ-ಸದ್ಗುರು ಮಾಸಪತ್ರಿಕೆಗನ್ನು ಪುನಃ ಆರಂ ಭಿಸಬೇಕೆಂದು ನಿಶ್ಚಯಿಸಿ, ತನ್ನ ವಾರ್ಧಕ್ಯದ ಕಡೆಗೆ ನೋಡದೆ. ಸ್ವತಃ ಪುಸ್ತಕಗಳನ್ನು ತಲೆಯಮೇಲೆ ಹೊತ್ತುಕೊಂಡು ಕರ್ನಾಟಕದಲ್ಲಿ ಮಾರ ಲಿಕ್ಕೆ ಹೊರಟನು! ಕೂಡಿ ಕೂಡಿದಾಗ ಆತನು ಮಾರಿದ ಪುಸ್ತಕಗಳ ಮಾರಾ ಟದಿಂದ ಧಾರವಾಡ ಜಿಲ್ಹೆಯ ಹತ್ತೇ ತಾಲೂಕುಗಳಲ್ಲಿ ಎಂಟು ಸಹಸ್ರ ರೂಪಾಯಿಗಳ ಸಾಲವು ತೀರಿ, ಸದ್ಯಕ್ಕೆ ಆರುಸಾವಿರ ರೂಪಾಯಿಗಳ ಸಾಲವು

ಮಾತ್ರ ಉಳಿದಿರುವದು! ಈ ಅವಸರದಲ್ಲಿ ಗಳಗನಾಥನು ಭಾಷಾ ಸೇವೆಯ ಅಂಗಗಳಾದ ಮೂರೂ ಕೆಲಸಗಳನ್ನು ಕ್ರಮವಾಗಿ ಮಾಡಬೇಕಾಯಿತು. ಅವುಗಳಲ್ಲಿ ಪುಸ್ತಕ ಬರೆದದ್ದು ಒಂದನೆಯ ಕೆಲಸವು; ಆ ಬರೆದ ಪುಸ್ತಕಗಳನ್ನು ಮುದ್ರಿಸುವದಕ್ಕಾಗಿ ಸ್ವತಃ ಎರಡು ಸ್ಥಳಗಳಲ್ಲಿ (ಅಗಡಿ, ಹಾವೇರಿ) ಪ್ರೇಸು ಇಟ್ಟದ್ದು ಎರಡನೆಯ ಕೆಲಸವು; ಬೇಗನೆ ಸಾಲತೀರಬೇಕೆಂದು ಆ ಮುದ್ರಿಸಿದ ಪುಸ್ತಕಗಳನ್ನು ತಲೆಯಮೇಲೆ ಹೊತ್ತು ಈಗ ಮಾರತೊಡಗಿರುವದು ಮೂರನೆಯ ಕೆಲಸವು! ಈ ಮೂರೂ ಕೆಲಸಗಳನ್ನು ಬೇರೆ ಬೇರೆಯವರು, ಅಂದರೆ, ಲೇಖಕರು - ಮುದ್ರಕರು - ವ್ಯಾಪಾರಿಗಳು ಮಾಡುವ ವಾಡಿಕೆಯೇ ವಿಶೇಷವಾಗಿ ಇರಲು, ಅವನ್ನೆಲ್ಲ ಅಭಿಮಾನತೊರೆದು ಕೈಮುಟ್ಟಿಮಾಡಿ ಧನ್ಯನಾಗುವ ಸುಯೋಗವನ್ನು ಸರ್ವೇಶ್ವರನು ಒದಗಿಸಿಕೊಟ್ಟದ್ದಕ್ಕಾಗಿ ನನಗೆ ಪರಮಾನಂದವಾಗಿರುವದು; ಯಾಕಂದರೆ ಪ್ರಾಮುಖ್ಯವಾಗಿ ಪುಸ್ತಕ ಮಾರುವಾಗ ನನಗಾದ ಅನುಭವದ ಲಾಭವನ್ನು ನಾನು ಇಷ್ಟೆಂದು ಹೇಳುವ ಹಾಗಿಲ್ಲ!

ಇನ್ನು ಉಳಿದಿರುವ ನನ್ನ ಆರು ಸಾವಿರ ರೂಪಾಯಿಗಳ ಸಾಲವು ತೀರಿ ಪುನಃ ಪಾಠಶಾಲೆಯೂ, ಸದ್ಗುರು ಮಾಸಪತ್ರಿಕೆಯೂ ಪ್ರಕಟವಾಗುವದರಲ್ಲಿ ಆಶ್ಚರ್ಯವಿಲ್ಲ; ಯಾಕಂದರೆ ಉತ್ತರ ಕರ್ನಾಟಕದ ಬೆಳಗಾವಿ, ವಿಜಾಪುರ, ಕಾರವಾರ ಎಂಬ ಮೂರು ಜಿಲ್ಹೆಗಳು ಹಾಗೇ ಉಳಿದಿರುವವು; ಲಲಿತ ಕನ್ನಡದ ನಾಲ್ಪಡಿ ಕೃಷ್ಣನ ಮೈಸೂರ ಸಂಸ್ಥಾನವು ಹಾಗೇ ಉಳಿದಿರುವದು; ಅಲ್ಲದೆ ನೈಜಾಮಪ್ರಾಂತವಿರುವದು, ಬಳ್ಳಾರಿಯ ಜಿಲ್ಹೆಯಿರುವದು; ಅಂದಬಳಿಕ ಚಿಂತಿಸುವದೇಕೆ? ಆದರೆ ತಟ್ಟನೆ ಸಾಲ ತೀರಲಿಕ್ಕೆ ಮೈಸೂರ ಸಂಸ್ಥಾನವೇ ತಕ್ಕದ್ದೆಂದು ನನ್ನ ಮನಸ್ಸಿಗೆ ತೋರಿತು; ಯಾಕಂದರೆ ನನ್ನ ಸದ್ಬೋಧ ಚಂದ್ರಿಕೆಯ ಚಂದಾದಾರರ ಸಂಖ್ಯೆಯು ಏಳು ಸಾವಿರಕ್ಕೆ ಮುಟ್ಟಿದಾಗ, ಒಂದೇ ಮೈಸೂರ ಸಂಸ್ಥಾನದಲ್ಲಿ ಸರಾಸರಿ ಮೂರು ಸಹಸ್ರ ಜನ ಚಂದಾದಾರರಿದ್ದರು; ಇತ್ತಿತ್ತ ನಾನು ಸದ್ಗುರು ಎಂಬ ಮಾಸಪತ್ರಿಕೆಯನ್ನು ಹೊರಡಿಸತೊಡಗಲು, ಅದಕ್ಕೂ ಮೈಸೂರವರ ಬೇಡಿಕೆಯೇ ಹೆಚ್ಚು; ಇಡಿಯ ಕನ್ನಡಿಗರಲ್ಲಿ ಸದಭಿಪ್ರಾಯದ-ಅಭಿನಂದನದಿಂದ

ನನ್ನನ್ನು ಉತ್ತೇಜನ ಗೊಳಿಸುವದರಲ್ಲಿ ಮುಂದಾದವರೆಂದರೆ ನಮ್ಮ ಮೈಸೂರಿನವರೇ! ಈ ಮುಂತಾದ ಕಾರಣಗಳಿಂದ ಯಾವಾಗಲೂ ಮೈಸೂರ ವರಲ್ಲಿ ನನ್ನ ವಿಶ್ವಾಸವು ಹೆಚ್ಚು. ವಾಚನಾಭಿರುಚಿಯುಳ್ಳವರೆಂದರೆ ಮೈಸೂರವರೇ ಎಂಬದು ನನ್ನ ನಂಬಿಗೆ! ಆದ್ದರಿಂದ ಮೈಸೂರ ಪರಿಚಯವು ನನಗೆ ಪ್ರತ್ಯಕ್ಷವಾಗಿ ಇರದಿದ್ದರೂ, ಅಲ್ಲಿಗೆ ಹೋದರೆಯೇ ನನ್ನ ಸಾಲವು ಆಯಾಸವಿಲ್ಲದೆ ಬೇಗನೆ ಕುಳಿತಲ್ಲಿ ತೀರಬಹುದೆಂದು ತಿಳಿದು, ಸಂಗಡ ಮೂರು ಜನರನ್ನು ಸಹಾಯಕ್ಕಾಗಿ ಕರೆದುಕೊಂಡು ಕರ್ನಾಟಕದ ಕೇಂದ್ರ ವೆನಿಸುವ ಬೆಂಗಳೂರಿಗೆ ಈಗ ನಾಲ್ಕು ತಿಂಗಳ ಹಿಂದೆ ನಾನು ಪುಸ್ತಕ ಗಳನ್ನು ಹೊತ್ತುಕೊಂಡು ಬಂದುಬಿಟ್ಟೆನು; ಇಲ್ಲಿಗೆ ಬಂದ ಬಳಿಕ ಬೆಂಗಳೂರಿಗೆ ಕಲ್ಯಾಣಪುರಿಯೆಂಬ ಮತ್ತೊಂದು ಹೆಸರು ಇರುತ್ತದೆಂಬದು ನನಗೆ ಗೊತ್ತಾಗಲು, ನನ್ನಂತಹ ದಿನಹೋದ ದಣಿದ ಲೇಖಕನ ಕಲ್ಯಾಣ ವನ್ನು ಕಲ್ಯಾಣಪುರಿಯು ನಿಶ್ಚಯವಾಗಿ ಮಾಡುವದೆಂಬ ನಂಬಿಗೆಯು ನನ್ನಲ್ಲಿ ಉಂಟಾಗಿದ್ದರೆ ಆಶ್ಚರ್ಯವಲ್ಲ !



## ೩ ಬೆಂಗಳೂರ ಧನೌದಾರ್ಯವು.

**ಬೆಂ**ಗಳೂರು ನಮ್ಮಂತಹ ಹಳ್ಳಿಯಜನರನ್ನು ಒಳಿತಾಗಿ ರಂಜಿಸುವಲ್ಲಿ ಸಂಶಯವಿಲ್ಲ. ಪುಸ್ತಕ ಮಾರಬಂದ ನಾನಂತು ಬೆಂಗಳೂರನ್ನು ನೋಡಿ ಹಿರಿ ಹಿರಿ ಹಿಗ್ಗಿದೆನು. ಅಲ್ಲಿಯ ಪ್ರಶಸ್ತವಾದ ಬೀದಿಗಳೇನು, ಸುಂದರ ಮನೆಗಳೇನು, ಸ್ವಚ್ಛತೆಯ ಸೊಬಗೇನು, ಜನರ ಚಟುವಟಿಕೆಯೇನು, ತೆರಪಿಲ್ಲದ ವಿವಿಧ ವಾಹನಗಳೇನು? ಇದಕ್ಕನ್ನಬೇಕು ನಾಗರಿಕತೆ! ಇಲ್ಲಿಯ ಜನರು ಮೃದುನುಡಿಯವರು, ವಿನಯಭಾವದವರು, ಗುಣಗ್ರಾಹಿಗಳು; ನಾವು ಇಂತಹ ಪಂಥದವರೆಂಬದು ಸ್ಪಷ್ಟವಾಗಿ ತಿಳಿಯುವಂತೆ ಧಾರ್ಮಿಕ ಬಾಹ್ಯಚಿಹ್ನಗಳನ್ನು ಸ್ಪಷ್ಟವಾಗಿ ಧರಿಸುವವರು! ಈ ಪಟ್ಟಣವನ್ನು ಕುರಿತು

ನಾನು ನನ್ನ "ರಾಣೀ-ಮೃಣಾಲಿನೀ" ಕಾದಂಬರಿಯ ಪ್ರಸ್ತಾವನೆಯಲ್ಲಿ ವರ್ಣಿಸಿರುವಂತೆ ಇನ್ನೊಮ್ಮೆ ಇಲ್ಲಿಯೂ ವರ್ಣಿಸಿ ಬಿಡುವೆನು; ಯಾಕೆಂದರೆ ಆದರದಲ್ಲ ದ್ವಿರುಕ್ತಿಯು ಅವಶ್ಯವಾದದ್ದು. ಕರ್ನಾಟಕದಲ್ಲಿ ಇಷ್ಟು ಸುಸಂಸ್ಕೃತ ಪ್ರಜೆಗಳುಳ್ಳ ಪಟ್ಟಣವನ್ನು ನಾನು ನೋಡಿದ್ದು ಇದೇ ಮೊದಲು ಎಂದು ಹೇಳಬಹುದು. ಇಲ್ಲಿ ಎಲ್ಲಿ ನೋಡಿದರೂ ಪದವೀಧರರೂ, ಪಂಡಿತರೂ ಕಣ್ಣಿಗೆ ಬೀಳುವರು; ಇಂಗ್ಲೀಷ ಭಾಷೆಯನ್ನು ಸುತರಾಂ ಅರಿಯದವರು ಅಪರೂಪವೆಂಬಹಾಗೆ ತೋರುವದು. ಅಕ್ಷರಸ್ಥರಲ್ಲದವರು ಇಲ್ಲಿ ಇಲ್ಲವೆಂತಲೇ ಹೇಳಬಹುದು. ಇಂಥ ಅಪರೂಪದ ಸುಸಂಸ್ಕೃತ ಸ್ಥಿತಿಗೆ ಇಲ್ಲಿಯ ಘನವಾದ ಸರಕಾರದಿಂದ ಒದಗಿಸಿಕೊಡಲಾಗಿರುವ ವಿದ್ಯಾಭ್ಯಾಸದ ಸಾಧನಗಳ ವೈಪುಲ್ಯವೇ ಕಾರಣವಾಗಿರುವದೆಂದು ನನಗೆ ತೋರುತ್ತದೆ. ಎಂತಹ ವಿದ್ಯಾಪೀಠವು, ಎಂತಹ ಕಾಲೇಜಗಳು, ಎಷ್ಟು ಹೈಸ್ಕೂಲುಗಳು! ಮಿಡಲ ಸ್ಕೂಲು, ಪ್ರಾಯಮರಿ ಸ್ಕೂಲುಗಳಿಗಂತು ಅಳತೆಯಿಲ್ಲ!! ಇಂತಹ ಸುಶಿಕ್ಷಣದಿಂದ ಸುಶಿಕ್ಷಿತರಾಗಿ ಉಚ್ಚಪದವಿಯನ್ನು ಹೊಂದಿದ ಈ ಪಟ್ಟಣದ ಮಹಾ ಜನದಲ್ಲಿ ನಿರಹಂಕಾರ, ಸೌಜನ್ಯ, ವಿನಯ, ಗುಣಗ್ರಾಹಕತೆ ಮುಂತಾದ ಸದ್ಗುಣಗಳು ತೋರುತ್ತಿದ್ದರೆ ಆಶ್ಚರ್ಯವೇನು? ವಾಚನಾಭಿರುಚಿಯು ಈ ಮೈಸೂರ ಪ್ರಾಂತದಲ್ಲಿಯಷ್ಟು ಕರ್ನಾಟಕದ ಇನ್ನಾವ ಬೇರೆ ಭಾಗದಲ್ಲಿಯೂ ಇಲ್ಲವೆಂಬದನ್ನು ನನ್ನ ಮೂವತ್ತುವರ್ಷದ ಲೇಖನವ್ಯವಸಾಯದ ಅನುಭವದಿಂದ ನಾನು ಹೇಳಬಲ್ಲೆನು.

ಈ ಪಟ್ಟಣದ ಪ್ರಜಾರಂಜನದ, ಹಾಗು ಪ್ರಜಾಸುಖದ ಸಾಧನಗಳನ್ನು ನೋಡಿದರೆ, ಈ ಸಂಸ್ಥಾನದ ಘನವಂತ ಪ್ರಭುವಿನ ಪ್ರಜಾವಾತ್ಸಲ್ಯವೂ, ಪ್ರಜಾಹಿತ-ತತ್ಪರತೆಯೂ ಚನ್ನಾಗಿ ವ್ಯಕ್ತವಾಗುವವು. ಪ್ರಜೆಗಳ ಕ್ಷೇಮಕ್ಕಾಗಿ ಏರ್ಪಟ್ಟಿರುವ ಹಲವು ರಾಜಕೀಯ ಖಾತೆಗಳಲ್ಲಿ, ಸರ್ವಕ್ಷೇಮಮೂಲವಾದ ದೇವಸ್ಥಾನಾದಿಗಳ ವ್ಯವಸ್ಥೆಯನ್ನು ನೋಡಿಕೊಳ್ಳುವದಕ್ಕಾಗಿ ಇಟ್ಟಿರುವ ಧಾರ್ಮಿಕ ಖಾತೆಯನ್ನೂ, ದೇವಸ್ಥಾನಾದಿ ಧಾರ್ಮಿಕ ಸ್ಥಳಗಳ ವಿಷಯದ ಇಲ್ಲಿಯ ಸುವ್ಯವಸ್ಥೆಯನ್ನೂ ನೋಡಿದರೆ, ಆಸ್ತಿಕರಾದ

ನಿಜವಾಗಿ ಧರ್ಮರಕ್ಷಕನೆಂದು ಕೊಂಡಾಡುವಲ್ಲಿ ಸಂಶಯವಿಲ್ಲ! ಆದರಂತೆ ರಾಜಕೀಯ ವ್ಯವಹಾರದಲ್ಲಿ ಪ್ರಜೆಗಳನ್ನು ಪ್ರತಿನಿಧಿ ಸಭೆಯ ದ್ವಾರದಿಂದ ಮೆಲ್ಲ ಮೆಲ್ಲನೆ ಸೇರಿಸಿಕೊಳ್ಳುತ್ತಿರುವದನ್ನು ನೋಡಿದ ಯಾವ ಪ್ರಾಗತಿಕ ಮನುಷ್ಯನೂ ಸಂತೋಷಪಡದೆ ಇರಲಾರನು! ಈ ಪಟ್ಟಣದಲ್ಲಿಯ ನಾಗರಿಕರ ಸುಂದರವಾದ ಮನೆಗಳು, ಪೌರಸಭೆಯವರ ಜಾಗರೂಕತೆಯ ಸುವ್ಯವಸ್ಥೆ, ಸ್ವಚ್ಛ ಸವಿನೀರಿನ ವಿಪುಲತೆ, ನಮ್ಮಂತಹ ಪರಸ್ಥರಿಗೆ ಕೃಷ್ಣಪಕ್ಷವನ್ನೇ ಮರೆಸಿಬಿಡುವ ವಿದ್ಯುಜ್ಜ್ಯೋತಿಗಳ ಸ್ವಚ್ಛ ಪ್ರಕಾಶ, ನವನಾಗರಿಕತೆಗಳ ದರ್ಶಕಗಳಾದ ವಿವಿಧ ಸಂಘ - ಕಾರಖಾನೆ - ದ್ರವ್ಯನಿಧಿಗಳು, ಅತ್ಯಂತ ಸುಖಾಭಿಲಾಷಿಗಳಿಗೂ ಬೇಕಾದಲ್ಲಿ ಬೇಕಾದಾಗ ದೊರೆಯುವ ಹೂ - ಹಣ್ಣು - ಕಾಯಿ - ಪಲ್ಲೆ ಮೊದಲಾದ ಸಂಸಾರೋಪಯುಕ್ತ ಸಮೀಚೀನ ವಸ್ತುಗಳು ಇವೇ ಮೊದಲಾದ ಸುಖ ಸಾಧನಗಳ ಸಂಪತ್ತನ್ನು ನೋಡಿದವರೆ, ಯಾರಿಗಾದರೂ '' ನಾಲ್ಕುದಿನ ಬೆಂಗಳೂರಲ್ಲಿ ಇದ್ದು ಹೋಗಬೇಕೆ ''ನ್ನುವ ಹಾಗೆ ಆಗುವಲ್ಲಿ ಸಂಶಯವಿಲ್ಲ; ಅದರಂತೆ ನನಗಾದರೂ ಇಚ್ಛೆಯು ಉತ್ಪನ್ನವಾದದ್ದರಿಂದ ಈಗ ಐದು ತಿಂಗಳಿನಿಂದ ಇಲ್ಲಿ ಇದ್ದುಬಿಟ್ಟಿರುವೆನು.

ಇಂತಹ ಸೊಬಗಿನ ಬೆಂಗಳೂರಿಗೆ ಬಂದು ನನ್ನ ಪುಸ್ತಕದ ವ್ಯಾಪಾರವನ್ನು ಆರಂಭಿಸಿದೆನು; ಆದರೆ ನಾನು ಬೆಂಗಳೂರಿಗೆ ಬಂದ ಎಂಟು ಹತ್ತು ದಿನದ ಅನುಭವದಂತೆ ಮುಂದೆಯೂ ನನಗೆ ಅನುಭವ ಬಂದಿದ್ದರೆ, ಯಾವಾಗೋ ನಾನು ಬಂದ ಹಾದಿಗೆ ಸುಂಕವಿಲ್ಲೆಂದು ಪುಸ್ತಕ ಹೊತ್ತುಕೊಂಡು ತಿರುಗಿ ಊರಿಗೆ ಹೋಗಿಬಿಡುತ್ತಿದ್ದೆನು. ನಾನೂ, ನನ್ನ ಮೂವರು ಸಹಾಯಕರೂ, ಸ್ಥಳಿಕರೊಬ್ಬರೂ ಕೂಡಿ ಪುಸ್ತಕಮಾರಲು ಬೇಕಾದಷ್ಟು ಪ್ರಯತ್ನಮಾಡಿದೆವು; ಆದರೆ ನಿರಾಶೆಯ ಹೊರತು ಫಲವೇನು ಆಗಲಿಲ್ಲ! ಆಗ ನಮ್ಮ ಸಹಾಯಕರು - '' ಇಲ್ಲಿ ಕನ್ನಡ ಪುಸ್ತಕಗಳ ಮೇಲೆ ಅಷ್ಟು ಆದರವಿಲ್ಲ! ನಮ್ಮ ಕಡೆಗೆ ನಿಮಗೆ ದಿನಾಲು ಇಪ್ಪತ್ತು ರೂಪಾಯಿ ಉತ್ಪನ್ನವಾಗುವ ಅನುಭವವಿದೆ; ಅಂದಬಳಿಕ ಸುಮ್ಮನೆ ಪಟ್ಟಣವಾಸದ ನಾಲ್ಕು ಜನರ ವೆಚ್ಚದತೊಂದರೆಗೆ ಒಳಗಾಗಿ ಯಾಕೆ ಇಲ್ಲಿಇರಬೇಕು?

ಬೆಂಗಳೂರು ನೋಡಿದಹಾಗಾಯಿತು, ಬಂದಹಾಗೆ ಪುಸ್ತಕ ಹೊತ್ತು ಕೊಂಡು ತಿರುಗಿ ಹೋಗಿಬಿಡುವದು ನಮಗೆ ನೆಟ್ಟಗೆ ಕಾಣುತ್ತದೆ. ಗಾಡಿಯು ವೆಚ್ಚದ ಮಟ್ಟಿಗೆ ಯಾರಿಗಾದರೂ ಬುಕ್ಕಸೇಲರರಿಗೆ ಪುಸ್ತಕ ಕೊಟ್ಟು ಹೋಗಿಬಿಡೋಣ" ಎಂದು ಹೇಳಿದರು. ಕೂಡಲೆ ನಾನೂ ಅವರ ಮಾತಿಗೆ ಒಪ್ಪಿಕೊಂಡೆನು ; ಆದರೆ ನನ್ನ ಮನಸ್ಸಿಗೆ ಮಾತ್ರ ಸಮಾಧಾನವಾಗಲಿಲ್ಲ! "ಬೆಂಗಳೂರಂತಹ ಅಚ್ಚ ಕನ್ನಡದ ಪಟ್ಟಣಕ್ಕೆ ಬಂದು ಏನೂ ಲಾಭ ಪಡೆಯದೆ ತಿರುಗಿ ಊರಿಗೆ ಹೋದರೆ ಜನರ ಮುಂದೆ ಏನು ಹೇಳಬೇಕು? ಬೆಂಗಳೂರ ಗೌರವವಾದರೂ ಏನು ಉಳಿದ ಹಾಗಾಗುವದು? ಶ್ರೀ ಸದ್ಗುರು ನಾಥನು ನನ್ನ ಬೆನ್ನು ಬಿಟ್ಟನೆ? ಸದ್ಗುರು ಪ್ರಭಾವವು ಅಡಗಿತೇ? ಈ ಮೊದಲೇ ಎಂಟು ಸಹಸ್ರ ರೂಪಾಯಿಗಳ ಸಾಲವನ್ನು ನಾನೇ ತೀರಿಸಿ ದೆನೇ"? ಎಂದು ಯೋಚಿಸುತ್ತಿರುವಾಗ, ಶ್ರೀ ಗುರು ಪ್ರಭಾವದಿಂದ ನಾನು ನಮ್ಮವರ ಮುಂದೆ-"ನಾನು ಬೆಂಗಳೂರಲ್ಲಿ ಒಂದು ಸಹಸ್ರ ರೂಪಾಯಿಗಳನ್ನಾ ದರೂ ಸಂಪಾದಿಸದೆ ಊರಿಗೆ ಬರಲಿಕ್ಕಿಲ್ಲ; ಬೇಕಾದರೆ ನೀವು ಊರಿಗೆ ಹೋಗಬಹುದು" ಎಂದು ಹೇಳಿದೆನು ! ಅಂದೇ ಬೆಂಗಳೂರಲ್ಲಿ ೨೫ ರೂಪಾ ಯಿಗಳ ಪುಸ್ತಕ ಮಾರಿದವು! ಅಂದಿನಿಂದ, ಅಂದರೆ ತಾರೀಖು ೧೧-೧೦-೨೭ ನೇ ಇಸವಿಯಿಂದ ತಾರೀಖು ೨೭-೧-೨೮ ನೆ ಇಸವಿಯ ವರೆಗೆ ಮೂರುವರೆ ತಿಂಗಳಲ್ಲ ಬೆಂಗಳೂರು ಹಾಗು ಬೆಂಗಳೂರ ಜಿಲ್ಹೆಯಲ್ಲಿ ಕೂಡಿ ಸರಾ ಸರಿ ಎರಡು ಸಾವಿರ ರೂಪಾಯಿಯು ಉತ್ಪತ್ತಿಯು ನನಗೆ ಆಯಿತು! ಒಂದು ಬೆಂಗಳೂರಲ್ಲಿ ಸಾವಿರದ ಐನೂರು ರೂಪಾಯಿಗಳ ಪುಸ್ತಕಗಳು ಮಾರಿದವು! ಶ್ರೀ ಸದ್ಗುರುನಾಥನು ಸತ್ಯಪ್ರತಿಜ್ಞನಲ್ಲವೆ? ಆತನ ಪ್ರಭಾವವು ಅಗಾಧ ವಾದದ್ದಲ್ಲವೆ? ಬೆಂಗಳೂರವರ ಈ ಔದಾರ್ಯಕ್ಕಾಗಿ ನಾನು ಎಷ್ಟು ಕೃತಜ್ಞ ನಾಗಿರಬಹುದು !

ಆದರೆ ಕೇವಲ ಒಂದುವರೆ ಸಾವಿರ ರೂಪಾಯಿಗಳ ಪುಸ್ತಕಗಳನ್ನು ಕೊಂಡದ್ದಕ್ಕಾಗಿ ನಮ್ಮ ಗೌರವದ ಬೆಂಗಳೂರಿಗೆ ನಾನು ಔದಾರ್ಯದ ಆರೋಪಮಾಡಿದ್ದರೆ, ನನ್ನ ಗಾವಿಲತನವು ಒಡೆದುಕಾಣದೆ ಹೋಗುತ್ತಿದ್ದಿಲ್ಲ; ಯಾಕಂದರೆ, ಬೆಂಗಳೂರ ಪಟ್ಟಣದ ವಿಸ್ತಾರವನ್ನೂ, ಅಲ್ಲಿಯ ಲಕ್ಷಾಂ

ತರದ ಜನವಸತಿಯನ್ನೂ, ಅಲ್ಲಿ ಕಂಡುಬಂದ ಕನ್ನಡ ಭಾಷೆಯ ವಿಷಯದ ಗೌರವವನ್ನೂ, ಅಲ್ಲಿಯ ವಿದ್ಯಾಪ್ರಸಾರದ ವೇಗವನ್ನೂ, ಜನರ ವಿದ್ಯಾ ಪಕ್ಷಪಾತಿತ್ವವನ್ನೂ, ವಿದ್ವಾಂಸರ ವಿಪುಲತೆಯನ್ನೂ, ಗ್ರಂಥಕಾರರಿಗೆ ದೊರೆಯುಬಹುದಾಗಿರುವ ಉತ್ತೇಜನದ ಸಾಧನಗಳನ್ನೂ ಮನಸ್ಸಿನಲ್ಲಿ ತಂದರೆ, ಒಂದು ಬೆಂಗಳೂರ ಔದಾರ್ಯದಲ್ಲಿ ನನ್ನ ಆರು ಸಹಸ್ರ ರೂಪಾಯಿಗಳ ಸಾಲವು ಸಹಜವಾಗಿ ತೀರತಕ್ಕದ್ದು; ಆದರೆ ಬೆಂಗಳೂರನ್ನೆಲ್ಲ ವ್ಯಾಪಿಸುವಷ್ಟು ಶಕ್ತಿಯು ನನ್ನಲ್ಲಿ ಇಲ್ಲದಿದ್ದರೆ, ಅದಕ್ಕೆ ಬೆಂಗಳೂರು ಏನು ಮಾಡಬೇಕು? ಆದರೆ ಬೆಂಗಳೂರಿಗೆ ನಾನು ಔದಾರ್ಯದ ಆರೋಪ ಮಾಡಿದ್ದರ ಮುಖ್ಯ ಕಾರಣವೇ ಬೇರೆ ಯಿರುವದು. ಅನ್ಯರ ಹಣದ ಕೊರತೆಯನ್ನು ಯಾವದೊಂದರ ಪ್ರತಿಫಲದ ರೂಪದಿಂದ ಪೂರಯಿಸಿ ಕೊಡುವ ಧನೌದಾರ್ಯಕ್ಕಿಂತ, ಅನ್ಯರ ಗುಣದ ಕೊರತೆಯನ್ನು ನಿಸ್ಪೃಹ ವೃತ್ತಿಯ ತಮ್ಮ ಸದ್ಗುಣಗಳ ಪ್ರದರ್ಶನದಿಂದ ಪೂರಯಿಸಿಕೊಡುವ ಗುಣೌದಾರ್ಯವು ಅತ್ಯಂತ ಶ್ರೇಷ್ಠವಾದದ್ದೆಂದು ನಾನು ಬರೆಯುವ ಕಾರಣವಿಲ್ಲ. ಇಂತಹ ಗುಣೌದಾರ್ಯವು ನನಗೆ ಬೆಂಗಳೂರಲ್ಲ ವಿಪುಲವಾಗಿ ಕಂಡುಬಂದದ್ದರಿಂದ, ನಾನು ಅದನ್ನು ಔದಾರ್ಯದಪಟ್ಟಣವೆಂದು ಕರೆದಿದ್ದೇನೆ. ಇನ್ನು ಅದರಧನೌದಾರ್ಯವನ್ನು ನಾನು ಅಗೌರವಿಸುತ್ತಿರುವೆನೆಂದುಮಾತ್ರ ಯಾರೂ ತಿಳಿಯಬಾರದು. ನನ್ನಂತಹ ಧನಾಕಾಂಕ್ಷಿಗಳಿಗಂತು ಧನದ ಔದಾರ್ಯವು ಅತ್ಯವಶ್ಯವಾದದ್ದು. ಅಂತಹ ಧನೌದಾರ್ಯವುಳ್ಳವರುಕರ್ನಾಟಕದಲ್ಲಿರುವರೆಂಬ ನಂಬಿಗೆಯಿಂದಲೇ ನಾನು ಪುಸ್ತಕ ಹೊತ್ತುಕೊಂಡು ಕರ್ನಾಟಕದಲ್ಲತಿರುಗುತ್ತಲಿದ್ದೇನೆ; ಆದರೆ ಅಚ್ಚಕುಸುಬಿಯ ಎಣ್ಣೆಯಲ್ಲಿ, ಹಾಗು ಅಚ್ಚ ಆಕಳತುಪ್ಪದಲ್ಲಿ ಇರುವಂತಹ ಗುಣ-ತಾರತಮ್ಯವು ಆವೆರಡುಬಗೆಯ ಔದಾರ್ಯಗಳಲ್ಲ ಇರುವದೆಂದುಹೇಳುವದು ನನ್ನ ತಾತ್ಪರ್ಯವಾಗಿರುವದು! ಇನ್ನು ಗುಣೌದಾರ್ಯವು ಬೆಂಗಳೂರಲ್ಲಿ ಏನುಕಂಡುಬಂದಿತೆಂಬದನ್ನು ಹೇಳುವೆನು. ಹೇಗಾದರೂ ನಾನು ನನ್ನ ಯೋಗ್ಯತೆಯಂತೆ ಬಹುದಿವಸಗಳಿಂದ ಲೇಖಗಳನ್ನು ಬರೆಯುತ್ತ ಬಂದವನಷ್ಟೆ? ಆದರೆ "ನನಗೆ ಸಾಲವು ಬಹಳವಾಯಿತಲ್ಲ" ಎಂಬ ಚಿಂತೆಯಿಂದ ಲೇಖಕನುಹೋಗಿ ಪುಸ್ತಕಮಾರುವವನು ಆದದ್ದರಲ್ಲಿ, ನನ್ನ ಗುಣದ ಕೊರತೆ

ಯಲ್ಲದೆ ಮತ್ತೇನು ಕಂಡುಬರುವದು? ಇದೊಂದು ಲೋಕಸೇವೆಯೆಂದು ತಿಳಿದು ಸರ್ವವೂ ಈಶ್ವರಾಧೀನವೆಂಬ ಭಾವದಿಂದ ನಿಸ್ಪೃಹನಾಗಿ ಲೇಖನ ಕಾರ್ಯವನ್ನು ಸಾಗಿಸುವವರು ಶ್ರೇಷ್ಠ ಲೇಖಕರು! ಅವರನ್ನು ಈಶ್ವರನ ಪ್ರತಿನಿಧಿಗಳೆಂತಲೂ ಕರೆಯಬಹುದು; ಆದರೆ ಅಂತಹ ಯೋಗ್ಯತೆಯಂತು ಇರಲಿ, ಹೊಸ ಪುಸ್ತಕ ಬರೆದರೆ ಸದ್ಗುರುವು ಹೊಸ ದುಡ್ಡು ಕೊಡುವನೆಂದು ತಿಳಿಯದೆ, "ಸಾಲವಾಯಿತಲ್ಲ" ಎಂಬ ಚಿಂತೆಯಿಂದ ಬರೆಯುವದನ್ನೇ ಬಿಟ್ಟು ಕೊಟ್ಟು, ಸದ್ಗುರು ಪ್ರಭಾವವನ್ನು ಮರೆತುಬಿಟ್ಟು ಪುಸ್ತಕಮಾರತೊಡಗಿದ್ದು, ಗಳಗನಾಥನಲ್ಲಿಯ ಉದಾತ್ತಗುಣದ ಕೊರತೆಯೇಸರಿ. ಚಿಂತೆಯಲ್ಲಿದ್ದವರ ಸದ್ಗುಣಗಳು ಮರೆಯಾಗುವದು ಸ್ವಭಾವಿಕವಷ್ಟೆ? ಇನ್ನು ಗಳಗನಾಥನು ತನ್ನ ಜೀವನ ಸರ್ವಸ್ವವನ್ನೇ ಗುರುಪ್ರಭಾವ ರೂಪವಾಗಿ ನಾಗಾಡಂಬರದಿಂದ ಔಪಚಾರಿಕವಾಗಿಯಾದರೂ ಭಾವಿಸುತ್ತಿರುವಾಗ, ಆತನ ಆ ಪ್ರಧಾನ ಕರ್ತವ್ಯದ ಭ್ರಷ್ಟತೆಯಲ್ಲಿ ಕೂಡ ಶ್ರೀ ಸದ್ಗುರುಪ್ರಭಾವದಿಂದ ಪಂಡಿತಮೈತ್ರಿ, ಮಹಾಪುರುಷರ ಸಹವಾಸ, ವಿವಿಧ ವಿಷಯಗಳ ಜ್ಞಾನ ಮುಂತಾದ ಲಾಭಗಳು ಆದದ್ದು ಸ್ವತಂತ್ರವಾದದ್ದು! ಆದರೂ ಬೆಂಗಳೂರ ಪಂಡಿತ ಜನರ ದರ್ಶನಮಾತ್ರದ ಮೈತ್ರಿಯು ನನ್ನನ್ನು ಮತ್ತೆ ಲೇಖಕನಾಗಿಮಾಡಿದ ನೆವದಿಂದ ನನ್ನ ಗುಣಾಂಶವನ್ನು ಜಾಗ್ರತಗೊಳಿಸಿದ ಉಪಕೃತಿಯನ್ನು ನಾನು ಎಂದೂ ಮರೆಯಲಾರೆನು!

ನಾನು ಬೆಂಗಳೂರಲ್ಲಿ ಪುಸ್ತಕ ಮಾರಿದ್ದೆಂದರೆ, ಎರಡೇದಿವಸ! ಉಳಿದ ದಿವಸಗಳಲ್ಲೆಲ್ಲ ನಾನು ಪುಸ್ತಕಗಳನ್ನು ಬರೆದಿರುವೆನು. ದುಡ್ಡಿನ ಭಕ್ತನು ನಾನು ಒತ್ತಾಯದಿಂದಾದರೂ ಕಾದಂಬರಿ ಬರೆಯುವದೇ ಬಹಳವಾದದ್ದರಿಂದ, ಈಗ ಸರಾಸರಿ ನಾಲ್ಕು ತಿಂಗಳಲ್ಲಿ ಕ್ರೌನ ಅಷ್ಟಪತ್ರದ ೭೫೦ ಪುಟಗಳ ಕಾದಂಬರಿಗಳನ್ನು ಬರೆದಿರುವೆನು. ಅವುಗಳಲ್ಲಿ ೨೫೬ ಪುಟಗಳನ್ನೊಳಗೊಂಡಿರುವ "ರಾಣೀ-ಮೃಣಾಲಿನಿ" ಎಂಬ ಐತಿಹಾಸಿಕ ಕಾದಂಬರಿಯೂ, ೧೫೬ ಪುಟಗಳ "ಮಹಾ ರಾಣಾ-ರಾಜಸಿಂಹ" ಎಂಬ ಐತಿಹಾಸಿಕ ಕಾದಂಬರಿಯೂ ವಿಶ್ವಕರ್ನಾಟಕದ ಶ್ರೀ ಲಕ್ಷ್ಮೀ ನರಸಿಂಹ ಪ್ರೆಸ್ಸಿನಲ್ಲಿ ಪ್ರಿಂಟಾಗಿದ್ದು, ಅವುಗಳ ಎರಡೆರಡು ಸಾವಿರ ಪ್ರತಿಗಳು ಮಾರಾಟಕ್ಕೆ ಸಿದ್ಧವಾಗಿ

ರುವವು. ಇನ್ನೊಂದು ೩೨೦ ಪುಟದ "ಧಾರ್ಮಿಕತೇಜ" ಅಥವಾ "ಪರ ಹಿತದಕ್ಷತಾ" ಎಂಬ ಐತಿಹಾಸಿಕ ಕಾದಂಬರಿಯು ಬರೆದು ಸಿದ್ಧವಾಗಿದ್ದು, ಹಣದ ಅನನುಕೂಲತೆಯ ಮೂಲಕ ಮುದ್ರಿಸದೆ ಹಾಗೇ ಉಳಿದಿರುವದು ! ಹೀಗೆ ಸಂಪೂರ್ಣ ಪುಸ್ತಕವು ಬರೆದು ಛಾಪಿಸದೆ ಉಳಿದದ್ದು, ನಾನು ಮಾಸ ಪತ್ರಿಕೆಯ ಉಪಾಧಿಗೆ ಒಳಗಾದಾಗಿನಿಂದ ಇಂದಿನವರೆಗೆ ಇದೇ ಮೊದಲು ಎಂದು ಹೇಳಬಹುದು. ಈ ಕಾದಂಬರಿಯ ವಿಷಯವಲ್ಲದೆ ಪ್ರಬಂಧ ರೂಪದ ೧೪೪ ಪುಟದ ವಿಷಯವನ್ನು ಬರೆದಿರುವೆನು. ಅದರಲ್ಲಿ ಈ "ಸದ್ಗುರು ಪ್ರಭಾವವು" ಒಂದಾಗಿದ್ದು, ಇನ್ನೆರಡು ಸಣ್ಣ ಭಾಷಣಗಳಿ ರುವವು. ಅವು—"ಗೀತೆಯ ಶ್ರವಣಾಧಿಕಾರ" "ಶ್ರೀ ವಿವೇಕಾನಂದರು ವೈದಿಕರಿಗೆ ಯಾರು?" ಎಂಬವು. ಒಟ್ಟಿಗೆ, ಪ್ರಬಂಧದ ಪುಟಗಳೆಲ್ಲ ಪ್ರಿಂ ಟಾಗಿರುವವೆಂದು ಹೇಳಬಹುದು. ಹೀಗೆ ನಾನು ಬೆಂಗಳೂರ ಪುಣ್ಯದಿಂದ ಶ್ರೀ ನಾಲ್ವಡಿ ಕೃಷ್ಣ-ರಾಜರ್ಷಿಯ ಪುಣ್ಯಭೂಮಿಯಲ್ಲಿ ಒಟ್ಟಿಗೆ ೮೯೩ ಪುಟದ ವಿಷಯವನ್ನು ನಾಲ್ಕು ತಿಂಗಳಲ್ಲಿ ಬರೆದ ಹಾಗಾಗಿರುವದು. ಇವು ಗಳಲ್ಲಿ "ರಾಣೀ-ಮೃಣಾಲಿನಿ" ಎಂಬ ಪ್ರಥಮ ಪುಸ್ತಕವನ್ನು ಶ್ರೀಮ ದ್ಯುವರಾಜ ಕಂಠೀರವ ನರಸರಾಜರವರ ಅಭ್ಯುದಯಕ್ಕಾಗಿಯೂ, "ಮಹಾ ರಾಣಾ-ರಾಜಸಿಂಹ" ಎಂಬ ದ್ವಿತೀಯ ಪುಸ್ತಕವನ್ನು ಶ್ರೀ ರಾಜಕುಮಾರ ಜಯಚಾಮರಾಜರವರ ಅಭ್ಯುದಯಕ್ಕಾಗಿಯೂ ನನ್ನ ಕುಲಸ್ವಾಮಿಯಾದ ಶ್ರೀ ಲಕ್ಷ್ಮೀ ವೇಂಕಟೇಶನ ಚರಣಗಳಿಗೆ ಅರ್ಪಿಸಿದಾಗ, ಆ ಭಗವಂತನ ಚರಣ ಕಮಲಗಳು ಮಲ್ಲಿಕಾ-ಚಂಪಕಗಳೆಂಬ ಎರಡು ಪುಸ್ತಕರೂಪ ಕುಸುಮಗಳಿಂದ ಅಲಂಕೃತಗಳಾದವು. ಇನ್ನುಮೇಲೆ ಈ "ಸದ್ಗುರು ಪ್ರಭಾವ" ರೂಪವಾದ ತೃತೀಯ ಪುಸ್ತಕವನ್ನು ಶ್ರೀಮನ್ನಾಲ್ವಡಿ ಕೃಷ್ಣ ಭೂವರರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀವೇಂಕಟೇಶನ ಚರಣಗಳಿಗೆ ಅರ್ಪಿ ಸುವಾಗ, ಆತನ ಚರಣಕಮಲಗಳು ತುಲಸೀ ಪತ್ರದಿಂದ ಸುಶೋಭಿತವಾಗ ಬೇಕಾಗಿರುವದು.! ಹೀಗೆ ಬೆಂಗಳೂರ ದರ್ಶನಮಾತ್ರದ ಪಂಡಿತ ಮೈತ್ರಿಯ ಯೋಗದಿಂದ ಬೆಂಗಳೂರಲ್ಲಿ ಪ್ರಕಟವಾಗುವ ಪುಸ್ತಕಗಳನ್ನೆಲ್ಲ ಇನ್ನು ಮುಂದೆ ಮೈಸೂರ ಸಂಸ್ಥಾನದ ಪ್ರಭುಗಳಾದ ಶ್ರೀಮನ್ನಾಲ್ವಡಿ ಕೃಷ್ಣದೊರೆ

ಗಳವರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀಪತಿಯ ಚರಣ ಕಮಲಗಳಿಗೆ ವಿವಿಧ ಪುಷ್ಪ ರೂಪಗಳಾಗಿ ಅರ್ಪಿಸಬೇಕೆಂದು ಮಾಡಿದ್ದೇನೆ. ನನ್ನ ಆ ಮನೋದಯವನ್ನು ಪೂರ್ಣಮಾಡಲು ಶ್ರೀ ಸದ್ಗುರು-ಪ್ರಭಾವವು ಸಮರ್ಥವಾಗಿರುವದು !



## ೪ ಬೆಂಗಳೂರ ಗುಣೌದಾರ್ಯವು.

**ಹೀ**ಗೆ ಪುಸ್ತಕ ಮಾರುವದಕ್ಕಾಗಿ ಬಂದ ನನ್ನನ್ನು ಪುನಃ ಪುಸ್ತಕ ಬರೆಯ ಹಚ್ಚಿದ್ದು ಬೆಂಗಳೂರ ಕನ್ನಡ ಭಾಷಾಭಿಮಾನಿಗಳಾದ ವಿದ್ವಾಂಸರ ದರ್ಶನಮಾತ್ರದ ಕ್ಷಣಿಕ ಮೈತ್ರಿಯೇ ಸರಿ! ಬೆಂಗಳೂರಿಗೆ ಬಂದ ಕೂಡಲೆ ನಾನು ದರ್ಶನಮಾಡಿಕೊಂಡ ಕೆಲವು ವಿದ್ವಾಂಸರ ದರ್ಶನಮಾತ್ರದಿಂದ ನನ್ನ ವೃತ್ತಿಯ ಪರಿವರ್ತನವಾಗಿಹೋಯಿತು; ಇಂತಹ ಸುಜನರಾದ ಯೋಗ್ಯತಾ ಸಂಪನ್ನ ಮಹನೀಯರ ಮುಂದೆ ಏನಾದರೂ ಬರೆಯುದಿದ್ದರೆ ದೊಡ್ಡ ಹಾನಿಯೆಂಬ ಭಾವನೆಯು ತಟ್ಟನೆ ನನ್ನಲ್ಲಿ ಉಂಟಾಯಿತು; ಯಾಕಂದರೆ ದೊಡ್ಡವರ ಸನ್ನಿಧಿ - ಸಂಸ್ಮರಣಗಳ ಹೊರತು ಲೇಖಕನಿಗೆ ಸತ್‌ಸ್ಫೂರ್ತಿಗಳು ಆಗುವದಿಲ್ಲವೆಂಬ ಅನುಭವವನ್ನು ನಾನು ಪಡೆದವನಾಗಿರುತ್ತೇನೆ; ಇದಲ್ಲದೆ ದೊಡ್ಡವರ ಪರಿತುಷ್ಟತೆಗೆ ಪಾತ್ರವಲ್ಲದ ಲೇಖಗಳನ್ನು ಲೇಖಗಳೆಂದಾದರೂ ಯಾಕೆ ಕರೆಯಬೇಕು ? ಅಂತಹ ನಿರರ್ಥಕ ಲೇಖಗಳನ್ನು ಬರೆಯುವದು ವೃಥಾಯಾಸವಲ್ಲವೆ? ಎಂಬ ಎಚ್ಚರಿಕೆಯೂ ನನ್ನಲ್ಲಿ ಉಂಟಾಯಿತು. ಹೀಗೆ ನನ್ನ ವೃತ್ತಿಪರಿವರ್ತನವನ್ನು ಮಾಡಿ ಮೈತುಂಬ ಎಚ್ಚರವನ್ನು ಹುಟ್ಟಿಸಿ, ನನ್ನನ್ನು ಬರೆಯತೊಡಗಿಸಿದ ವಿದ್ವಾಂಸರು ಯಾರು ಯಾರೆಂಬದನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳುವೆನು.

೧ ಮ|| ರಾ|| ರಾ|| ಹೊಸಕೆರೆ ಚಿದಂಬರಯ್ಯನವರು—ನಾನು ಬೆಂಗಳೂರಿಗೆ ಬಂದಕೂಡಲೆ ದರ್ಶನಮಾಡಿಕೊಂಡದ್ದೆಂದರೆ ಇವರದು ; ಯಾಕಂದರೆ ಇವರು ನನ್ನ ಪೂರ್ವ ಪರಿಚಿತರು, ಸಜ್ಜನರು, ಸ್ವಧರ್ಮನಿರತರು, ಸತ್ಸಮಾಗಮದಿಂದ ಅತ್ಯಂತ ಸಾತ್ವಿಕರಾದವರು ! ನಾನಿದ್ದಮನೆಗೆ ಇವರ

ಮನೆಯು ತೀರ ಸಮೀಪ. ಇವರು ಹಲವು ಗೌರವದ ಲೇಖಗಳನ್ನು ಬರೆದವರು, ಮಾಸಪತ್ರಿಕೆಗಳನ್ನು ನಡೆಸಿದವರು. ಇಂತಹವರ ಪ್ರಥಮ ದರ್ಶನವೆಂದರೆ, ವಿಘ್ನಹಾರಕ ಮಂಗಲಮೂರ್ತಿಯ ದರ್ಶನವಾದಂತಲ್ಲವೆ? ಇವರು ಬೆಂಗಳೂರಲ್ಲಿ ದರ್ಶನಮಾಡಿಕೊಳ್ಳಬಹುದಾದ ವಿದ್ವಾಂಸರ ಹೆಸರುಗಳನ್ನೂ, ಕನ್ನಡದಮೇಲಿನ ಪ್ರಕೃತದ ಬೆಂಗಳೂರ ಜನರ ಆದರದ ಸ್ವರೂಪವನ್ನೂ ನನಗೆ ತಿಳಿಸಿದರು.

೨ ಮ|| ರಾ|| ರಾ|| ಟಿ. ಎಸ್. ವೆಂಕಣ್ಣಯ್ಯನವರು, ಎಂ. ಎ., ಮೈಸೂರ ಮಹಾರಾಜಾ ಕಾಲೇಜಿನ ಕನ್ನಡ ಅಧ್ಯಾಪಕರು— ಇವರಾದರೂ ನನ್ನ ಪೂರ್ವ ಪರಿಚಿತ ಸನ್ಮಾನ್ಯ ಮಿತ್ರರೇ! ಇವರು ಧಾರವಾಡದ ಮಿಶ್ರ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾಗಿನಿಂದಲೇ ನನಗೆ ಇವರ ಪರಿಚಯು. ಅಗಡಿಯ ಶ್ರೀ ಗುರುಸ್ಥಾನದಲ್ಲಿ ಅಲ್ಪಕಾಲವಾದರೂ ನಾವಿಬ್ಬರೂ ಕೂಡಿ ವ್ಯವಹರಿಸಿದವರಿರುವದರಿಂದ, ಇವರು ನನ್ನ ಗುರು ಬಂಧುಗಳೂ ಆಗಿರುವರು! ಅಲ್ಲದೆ ನನ್ನ ಗುಣಕಣವನ್ನು ಗುಡ್ಡದಷ್ಟು ಮಾಡಿ ನನ್ನ ಪರೋಕ್ಷದಲ್ಲಿಯೂ ತಮ್ಮವರಿಗೆ ನನ್ನ ಪರಿಚಯ ಮಾಡಿಕೊಡುತ್ತಬಂದಿದ್ದ ಅನಿಮಿತ್ತ ಬಾಂಧವರಿವರು! ಆದರೆ ಈಗಿನ ತಮ್ಮ ಉತ್ಕರ್ಷದ ಸ್ಥಿತಿಯಲ್ಲಿಯೂ ನನ್ನಂತಹ ಬಡವನೊಡನೆ ಒಂದೇ ಪ್ರೇಮಲ ವೃತ್ತಿಯಿಂದ ನಡೆದುಕೊಳ್ಳುವದನ್ನು ನೋಡಿ, ನನ್ನ ಮನೋವೃತ್ತಿಗಳು ಉನ್ನತವಾದವು!

೩ ಮ|| ರಾ|| ರಾ|| ಡಿ. ವಿ. ಗುಂಡಪ್ಪನವರು, ಮೈಸೂರ ನ್ಯಾಯವಿಧಾಯಕ ಸಭೆಯ ಸದಸ್ಯರು, "ಕರ್ನಾಟಕ"ದ ಸಂಪಾದಕರು— ಇವರ ಯೋಗ್ಯತೆಯ ಕೀರ್ತಿಯನ್ನು ನಾನು ಕಿವಿಯಿಂದ ಕೇಳಿದ್ದೆನು; ಆದರೆ ಪ್ರತ್ಯಕ್ಷದರ್ಶನವಾದಾಗ ಇವರ ಸೌಜನ್ಯಾದಿ ಗುಣಗಳಿಂದ ಇವರ ಆ ಕೀರ್ತಿಯು ನಿಶ್ಚಯವಾಗಿ ಅಲಂಕೃತವಾಯಿತು! ಇವರು ಬರೆದಿರುವ "ಗೋಪಾಲರಾವ್ ಗೋಖಲೆಯ"ವರ ಚರಿತ್ರವನ್ನು ಬುದ್ಧಿಪೂರ್ವಕವಾಗಿ ಓದಿದೆನು. ಬಹಳ ಸಮಾಧಾನವಾಯಿತು! ಒಂದು ಸಭೆಯ ಅಧ್ಯಕ್ಷರಾದಾಗ ಇವರ ಭಾಷಣ ಕೇಳುವ ಸುಯೋಗವೂ ನನಗೆ ಒದಗಿ, ಇವರ ಕೀರ್ತಿಯ ಗುಟ್ಟು ಗೊತ್ತಾಯಿತು!

೪ ಮ|| ರಾ|| ರಾ|| ಬೆಳ್ಳಾವೆ ವೆಂಕಟನಾರಾಯಣಪ್ಪನವರು,ಎಂ.ಎ., —ಕನ್ನಡದ ಅತ್ಯಂತ ಅಭಿಮಾನಿಗಳಾದಈ ಧರ್ಮನಿರತ ಮಹನೀಯರ ಪ್ರಥಮ ಪರಿಚಯವು ನನಗಾದದ್ದು ಬೆಳಗಾವಿಯ ಸಾಹಿತ್ಯ ಪರಿಷತ್ತಿನಲ್ಲಿ! ಇವರ ಸ್ಪಷ್ಟವಾದಿತ್ವಕ್ಕಾಗಿ ಇವರಲ್ಲಿ ನನ್ನ ಪೂರ್ಣ ವಿಶ್ವಾಸ! ನಾನು ಬೆಂಗಳೂರಿಗೆ ಬಂದ ಬಳಿಕ ಸಾಹಿತ್ಯ ಪರಿಷತ್ತಿನಲ್ಲಿ ಇವರ ದರ್ಶನಮಾಡಿ ಕೊಂಡಾಗ, ಕನ್ನಡಭಾಷೆಯ ಏಕೀಕರಣದ ವಿಷಯವಾಗಿ ಒಬ್ಬ ದೊಡ್ಡ ಭಾಷಾ ಪಂಡಿತನೊಡನೆ ಮಾತಾಡುವಂತೆ ನನ್ನೊಡನೆ ಇವರು ಕಸರಿಲ್ಲದೆ ಸ್ಪಷ್ಟ ಮಾತಾಡುವದನ್ನು ನೋಡಿ, ನಾನೊಬ್ಬ ಗಣ್ಯ ಮನುಷ್ಯನಿದ್ದೇ ನೆಂಬ ಅಹಂಕಾರವು ನನ್ನಲ್ಲಿ ಉತ್ಪನ್ನವಾಯಿತು! ಮಾಡಿದರೆ ಇಂತಹ ಚಿಕಿತ್ಸಕರ ಮುಂದೆಯೇ ಲೇಖಕನ ವ್ಯವಸಾಯವನ್ನು ಮಾಡಬೇಕೆಂಬ ಉತ್ಸಾಹವು ನನ್ನಲ್ಲಿ ಹುಟ್ಟಿತು!

೫ ಮ|| ರಾ|| ರಾ|| ಮಾಸ್ತಿ ವೆಂಕಟೇಶಯ್ಯಂಗಾರರವರು, ಎಂ, ಎ, ರೆವಿನ್ಯೂ ಸಬ್ ಡಿವಿಜನಲ್ ಆಫೀಸರ್ ಮೈಸೂರು - ಕೀರ್ತಿಸಂಪನ್ನರಾದ ಈ ಮಹನೀಯ ತರುಣರ ದರ್ಶನವಾದಾಗ ನನ್ನ ಮನಸ್ಸಿನಮೇಲೆ ಆದ ಸುಪರಿಣಾಮವನ್ನು ಬರೆದು ಅವರ ಸತ್ವವನ್ನು ಕಡಿಮೆ ಮಾಡುವದಕ್ಕಿಂತ, ಅದನ್ನೆಲ್ಲ ಮೌನದಿಂದ ನಾನು ಪಚನಮಾಡಿಕೊಳ್ಳುವದೇ ನೆಟ್ಟಗೆ! ಈ ರಸಿಕ ವಿದ್ವಾಂಸರ ವಿನಯವೆಷ್ಟು, ಸೌಜನ್ಯವೆಷ್ಟು, ನಿರಹಂಕಾರವೆಷ್ಟು, ಪರರ ಕೆಲಸದ ವಿಷಯದ ಸಹಾನುಭೂತಿಯೆಷ್ಟು! "ನೀವು ಕರ್ನಾಟಕದಲ್ಲಿ ಬಹಳ ಕೆಲಸಮಾಡಿದವರು, ನಮಗೆ ಹಿರಿಯರು" ಎಂದು ಈ ವಿಶಾಲಹೃದಯದ ತರುಣರು ಪ್ರಸನ್ನವದನದಿಂದ ಅನ್ನುವಾಗ, ನಿಜವಾಗಿಯೇ ನನ್ನ ಹೃದಯವೂ ವಿಶಾಲವಾಯಿತು! ಇಂತಹ ಸದ್ಗುಣಾಲಂಕೃತ ತರುಣರು ಗದ್ಯ-ಪದ್ಯ ರಚನೆಯಲ್ಲಿ ಸಮರ್ಥರೂ, ಸಣ್ಣಕಥೆಗಳಿಂದ "ಸಾಹಿತ್ಯ" ವೆಂಬ ತಾತ್ವಿಕ ವಿಷಯದಂತಹ ಸೂಕ್ಷ್ಮವಿಷಯಗಳವರೆಗೆ ಮನಸ್ಸುಹಾಕುವ ಕಲಾ ಕುಶಲರೂ ಆಗಿರುವರು. ಇವರ ದರ್ಶನದಿಂದ ನನ್ನ ಗುಣಪೋಷಣವು ಬಹಳ ಚನ್ನಾಗಿ ಆಯಿತು!

೬ ಮ|| ರಾ|| ರಾ|| ರಾಜಸಭಾಭೂಷಣ ಕರ್ಪೂರ ಶ್ರೀನಿವಾಸ ರಾಯರು, ಬಿ.ಎ., ಎಲ್.ಸಿ.ಇ., ರಿಟಾಯಿರ್ಡ್ ಚೀಫ್ ಇಂಜನಿಯರ್— ಈ ಪುಣ್ಯವಂತರ ಔದಾರ್ಯದ ಕೀರ್ತಿಯನ್ನು ನಾನು ಬಹು ದಿವಸಗಳಿಂದ ಕೇಳುತ್ತಿದ್ದೆನು. ಇವರ ವಿಚಾರ-ಪುಷ್ಟವಾದ ಉದಾತ್ತ ಲೇಖಗಳನ್ನು ನಾನು ಓದಿರುವೆನು. ಇವರು ನಮ್ಮ ಹಾವೇರಿಯ ಶಿವಾಲಯದಲ್ಲಿ, ಹಾಗೂ ಧಾರವಾಡದ ಬ್ರಾಹ್ಮಣ ಸಭೆಯಲ್ಲಿ ಮಾಡಿದ ಧಾರ್ಮಿಕ ಉಪನ್ಯಾಸದಿಂದ ನನ್ನ ಮನಸ್ಸು ಸಮಾಧಾನವಾಗಿರುವದು; ಬೆಳಗಾವಿಯ ಸಾಹಿತ್ಯ ಪರಿಷತ್ತಿನಲ್ಲಿ ಇವರ ಪ್ರತ್ಯಕ್ಷ ಪರಿಚಯವಾಗಲು, ದೊಡ್ಡ ಲಾಭವಾದಂತೆ ನಾನು ಸಂತೋಷಪಟ್ಟೆನು; ಹೀಗಿರುವಾಗ ನಾನು ಬೆಂಗಳೂರಿಗೆ ಬಂದಬಳಿಕ ಈ ಮಹನೀಯರ ದರ್ಶನಮಾಡಿಕೊಳ್ಳಲು, ಈ ವಾತ್ಸಲ್ಯಹೃದಯದ ನನ್ನ ಗುರು ಸ್ವರೂಪರು, ತಮ್ಮ ವಾತ್ಸಲ್ಯದ ಮಾತುಗಳಿಂದ ನನ್ನ ಕಾರ್ಯೋತ್ಸಾಹವನ್ನು ಹೆಚ್ಚಿಸಿ-"ನಮ್ಮ ಯುವರಾಜರು ಕನ್ನಡದ ಅಭಿಮಾನಿಗಳು! ನಿಮ್ಮ ಪುಸ್ತಕಗಳನ್ನೆಲ್ಲ ನನ್ನ ಕಡೆಗೆ ತಂದುಕೊಡಿರಿ. ನಾನು ಅವರಿಗೆ ಅರ್ಪಿಸಿ ಉತ್ತೇಜನ ಕೊಡಿಸುವೆನು" ಎಂದು ನುಡಿದಾಗ, ನನ್ನಲ್ಲಿ ಉಂಟಾದ ಕೃತಜ್ಞತೆಯು ನನ್ನ ಹೃದಯಕ್ಕೇ ಗೊತ್ತು! ಇಂತಹ ಬಡವರ ಆಧಾರವಾಗಿರುವವರು ತೀರ ವಿರಲ! ಈ ಮಹನೀಯರ ಸಾನ್ನಿಧ್ಯದಲ್ಲಿರುವವರೆಗಾದರೂ ನಾನು ಉದಾರಹೃದಯನಾಗಿದ್ದೆನು!

೭ ರಾಜಕಾರ್ಯಪ್ರಸಕ್ತ ರಾವ ಬಹದ್ದೂರ್ ಎಂ. ಶಾಮರಾಯರು, ಎಂ. ಎ., ರಿಟಾಯಿರ್ಡ್ ಇನ್‌ಸ್ಪೆಕ್ಟರ್ ಜನರಲ್ ಆಫ್ ಎಜ್ಯುಕೇಶನ್—ಈ ಮಹನೀಯರ ದರ್ಶನಮಾಡಿಕೊಳ್ಳುವಾಗ ನನಗಾದ ಕೌತುಕವು ಅವರ್ಣನೀಯವಾದದ್ದು. ಈ ಅನುಭವಿಕ ವಿದ್ವಾಂಸರು ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಮಹಾ ಸಮಾರಂಭದ ಅಧ್ಯಕ್ಷರಾಗಿ ಬರುತ್ತಿದ್ದಾಗ, ನಾನು ಇವರ ಕೈಯಿಂದ ಉಚಿತಗಳನ್ನು ಪಡೆದವನು. ಅಂತಹ ವಿದ್ಯಾರ್ಥಿಯು ನಾನು ಈಗಲೂ ವಿದ್ಯಾರ್ಥಿಯಾಗಿಯೇ ಈ ಘನವಂತರ ದರ್ಶನಮಾಡಿಕೊಳ್ಳುವೆನಲ್ಲ, ಎಂಬ ಪವಿತ್ರ ಭಾವವು ಉಂಟಾಗಿ ನನ್ನ ಹೃದಯವು ಕಂಪಿಸಿತು. ಈ ಮಹನೀಯರು ಕರುಣಿಸಿ ನನ್ನನ್ನು ಕುರಿತು-

"ಯೂನಿವರ್ಸಿಟಿಗೆ ನಿಮ್ಮ ಪುಸ್ತಕಗಳನ್ನು ಕಳಿಸಿರಿ, ಅವನ್ನು ನಾವು ಹಚ್ಚಲು ಯತ್ನಿಸುವೆವು" ಎಂದು ಹೇಳಲು, ನನಗೆ ಇನ್ನೂ ಒಳ್ಳೆಯ ಪುಸ್ತಕಗಳನ್ನು ಬರೆಯಬೇಕೆಂಬ ಉತ್ಸಾಹವು ಉತ್ಪನ್ನವಾಯಿತು.

ಆ ಪ್ರಾಕ್ತನ ವಿಮರ್ಶಾ ವಿಚಕ್ಷಣರಾದ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರವರು, ಎಂ. ಆರ್. ಎ. ಎಸ್ — ಕೀರ್ತಿಶಾಲಿಗಳಾದ ಈ ಮಹನೀಯರು ಕರ್ನಾಟಕಕ್ಕೆ ದೃಢಪರಿಚಿತರೆಂಬದಿಷ್ಟೇ ಅಲ್ಲ, ಗತಿಸಿಹೋಗಿರುವ ಕೀರ್ತಿಶೇಷ ಕವಿಪುಂಗವರ ಕೀರ್ತಿಯನ್ನು ಪ್ರಕಾಶಗೊಳಿಸುವಾಗ ಆದ ಆ ಕವಿವರರ ಆವೇಶ-ಶೇಷದಿಂದ ಇವರು ಕರ್ನಾಟಕಕ್ಕೆ ಅತ್ಯಂತ ಮಾನ್ಯರೂ, ಪೂಜ್ಯರೂ ಆಗಿರುವರು ಇವರ ಕವಿಚರಿತೆಯಂತಹ ಪರಿಶ್ರಮದ ಅರ್ಥಪೂರ್ಣ ಕೃತಿಯು ನಮ್ಮಂತಹ ಪಾಮರ ಲೇಖಕರ ವಿಮರ್ಶಾ ಶಕ್ತಿಗೆ ಪೋಷಕವೂ, ಪುಷ್ಟಿದಾಯಕವೂ ಆಗಿರುವದರಲ್ಲಿ ಸಂಶಯವಿಲ್ಲ. ಇವರ ಈ ಗೌರವದ ಕೃತಿಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ, ಹೆಚ್ಚು ತಗ್ಗಿದ್ದಲ್ಲಿ ಸ್ವಲ್ಪ ಉಬ್ಬನ್ನೂ, ಹೆಚ್ಚು ಉಬ್ಬಿದ್ದಲ್ಲಿ ಸ್ವಲ್ಪ ತಗ್ಗನ್ನೂ ಮಾಡಿ ಸರಿಪಡಿಸಬಹುದು; ಹುರಕುಬರಕಿದ್ದದ್ದನ್ನು ತಿಕ್ಕಿ ನುಣುಪುಮಾಡಬಹುದು, ಮಸಕಾಗಿದ್ದದ್ದನ್ನು ಬಣ್ಣಕೊಟ್ಟು ರಂಜಿಸಬಹುದು; ಒಪ್ಪಹಾಕಿ ಅದಕ್ಕೆ ಹೊಳಪನ್ನೂ ಉಂಟುಮಾಡಬಹುದು; ಆದರೆ ಪ್ರಾಚೀನ ಕವಿಗಳ ಕೀರ್ತಿಯನ್ನು ಪ್ರಕಾಶಗೊಳಿಸಿದ ಅಗ್ರಪೂಜೆಯ ಮಾನವು ನಮ್ಮ ಪೂಜ್ಯರಾದ ಆಚಾರ್ಯರಿಗಲ್ಲದೆ ಅನ್ಯರಿಗೆ ದೊರೆಯಲಾರದು! ಇಂತಹ ಘನವಾದ ಯೋಗ್ಯತೆಯ ಮಹನೀಯರು, ನನ್ನ ಸನ್ಮಾನನೀಯ ಮಿತ್ರಮಂಡಲಿಯೊಡನೆ ನಾನು ದರ್ಶನಮಾಡಿಕೊಳ್ಳಲಿಕ್ಕೆ ಹೋದಾಗ—"ನಿಮ್ಮ ಕೀರ್ತಿಯನ್ನು ಕೇಳಿ ಕವಿಗಳು ತೃಪ್ತವಾಗಿದ್ದವು; ಆದರೆ ಆ ತೃಪ್ತಿಯ ವಿಷಯದ ಅವಿಶ್ವಾಸದಿಂದ ಜಗಳಮಾಡುವ ಕಣ್ಣುಗಳೂ ಇಂದು ತೃಪ್ತವಾದವು," ಎಂದು ಗೌರವಿಸಿದ್ದನ್ನು ಕೇಳಿ, ಸಾಮಾನ್ಯ ಮನುಷ್ಯನಾಗಿದ್ದ ನನ್ನಲ್ಲಿ ನಾಚಿಕೆಯೂ, ಅದರೊಡನೆ ಧನ್ಯತೆಯೂ ಉಂಟಾದವು; ಯಾಕಂದರೆ ದೊಡ್ಡವರ ಮಾತಿನಲ್ಲಿ ಸಂಶಯಪಡವನೆ? ನಾನು ಮತ್ತೊಮ್ಮೆ ಮಕರ ಸಂಕ್ರಮಣದ ದಿವಸ ನಮ್ಮಕಡೆಯ ಪದ್ಧತಿಯಂತೆ ಎಳ್ಳು ಸಕ್ಕರೆ ಕೊಡುವ

ಸೇವದಿಂದ ಆಚಾರ್ಯವರ್ಯರ ದರ್ಶನಕ್ಕಾಗಿ ಹೋಗಿದ್ದೆನು. ಆಗ ಈ ಮಹನೀಯರು ಪಟ್ಟ ಆನಂದವೂ, ತೋರಿಸಿದ ಸೌಜನ್ಯವೂ ಸಂಸ್ಮರಣೀಯವಾಗಿರುವವು. ನಾನು ಇಂತಹ ದೊಡ್ಡವರೊಡನೆ ಹೆಚ್ಚು ಮಾತಾಡಲು ಸಂಕೋಚಪಟ್ಟು ಮನೆಗೆ ಹೋಗುವದಕ್ಕಾಗಿ ಅಪ್ಪಣೆ ಕೇಳಿಕೊಳ್ಳಲು, ಈ ಗುರುಸ್ವರೂಪರು ಆದರದಿಂದ ನನ್ನನ್ನು ಕುಳ್ಳಿರಿಸಿಕೊಂಡು ರಸವತ್ತಾದ ಪಂಚಫಲಗಳನ್ನು ನನಗೆ ಆಶೀರ್ವಾದರೂಪವಾಗಿ ಕೊಟ್ಟು, ನನ್ನ ಹೃದಯವನ್ನು ರಸವತ್ತಾಗಮಾಡಿದರು! ಇಂತಹ ವಿಮರ್ಶಾ- ವಿಚಕ್ಷಣರಾದ ಪೂಜ್ಯರ ವಿಮರ್ಶೆಗೆ ತಕ್ಕ ಒಂದು ಪುಸ್ತಕವನ್ನಾದರೂ ಇನ್ನು ಬೇಗನೆ ಬರೆಯಬೇಕೆಂಬ ಉತ್ಸಾಹವು ನನ್ನಲ್ಲಿ ಉಂಟಾಯಿತು!

೯ ಮ|| ರಾ|| ರಾ|| ಎ. ನರಸಿಂಹಯ್ಯನವರು, ಬಿ.ಎ.ಎಲ್.ಟಿ., ಕನ್ನಡ ಟ್ರಾನ್ಸಲೇಟರ-ಈ ತರುಣ ವಿದ್ವಾಂಸರು ಅತ್ಯಂತ ಸುಜನರು, ಉತ್ಸಾಹಶಾಲಿಗಳು, ಸತ್ಕರ್ಮನಿರತರು,ಕೇವಲ ವಯೋಗತರೆಂಬ ಸೇವದಿಂದ ನನ್ನಂತಹ ಲಘುವೃತ್ತಿಯವರಿಗೂ ಗುರುತ್ವಕೊಡುವಷ್ಟು ವಿನಯಭಾವದವರು! ಇವರೊಡನೆ ಸಂಭಾಷಣ ಮಾಡುವಾಗ ನನ್ನ ಲೇಖನ ವ್ಯವಸಾಯಕ್ಕೆ ಉಂಟಾದ ಸಹಾಯವನ್ನುನಾನು ಎಂದೂಮರೆಯಲಾರೆನು. ದೇವತೆಗಳ ಮುಖವಾಗಿರುವ ಅಗ್ನಿಯಂತೆ, ವಿವಿಧಲೇಖಕರ ಲೇಖಗಳ ರುಚಿನೋಡಿ ಅವನ್ನುವಿದ್ವಜ್ಜನರ ಮುಂದಿಡುವದೃಷ್ಟಿಯಿಂದ ಇವರು ವಿದ್ಯಾಧಿದೈವತದ ಮುಖಸ್ವರೂಪರಾಗಿರುವರು! ಅಂದಬಳಿಕ ಇವರಲ್ಲಿರುವ ರಸಜ್ಞತೆಯನ್ನೂ, ವಿವಿಧ ವಿಷಯಗಳ ಪಚನ ಶಕ್ತಿಯನ್ನೂ ಹೆಚ್ಚಿಗೆವರ್ಣಿಸುವದೇಕೆ? ಇವರ ದರ್ಶನದಿಂದ ನನ್ನಲ್ಲಿ ಉಂಟಾದ ಕಾರ್ಯೋತ್ಸಾಹವು ಫಲಕಾರಿಯಾಗದೆ ಹೋಗಲಾರದು.

೧೦ ಮ|| ರಾ|| ರಾ|| ತಾತಾಚಾರ್ಯಶರ್ಮಾ, ವಿಶ್ವಕರ್ನಾಟಕದ ಸಂಪಾದಕರು--ಈ ಕ್ಷಾತ್ರವೃತ್ತಿಯ ತರುಣರ ದರ್ಶನದಿಂದ ಯಾರ ಕ್ಷಾತ್ರವೃತ್ತಿಯಾದರೂ ಉಕ್ಕಿ ಬಾರದೆ ಹೋಗಲಿಕ್ಕಿಲ್ಲ. ನನ್ನ "ಧರ್ಮರಹಸ್ಯ"ವೆಂಬ ಕಾದಂಬರಿಯು ಇಲ್ಲಿಯ ಮೆಟ್ರಿಕ್ ಪರೀಕ್ಷೆಗೆ ಪಠ್ಯಪುಸ್ತಕವಾಗಿದ್ದಾಗ, ಇವರು ಅದನ್ನು ಇಲ್ಲಿಯ ರಾಷ್ಟ್ರೀಯ ಶಾಲೆಯ ವಿದ್ಯಾರ್ಥಿಗಳಿಗೆ ಹೇಳುವಾಗ ಮಾಡಿರುವ ಮಾರ್ಮಿಕ ವಿಮರ್ಶೆಯು ಅತ್ಯಂತ ಬೋಧಪ್ರದವೂ,

ಸಂಸ್ಕರಣ ಶೀಲವೂ ಆಗಿರುವದು. ಇಂತಹ ನಿಷ್ಠಾವಂತ ವಿಮರ್ಶಕರಿದ್ದರಲ್ಲವೇ ಲೇಖಕನ ಶ್ರಮದ ಸಾರ್ಥಕತೆಯಾಗುವದು! ಇವರ ಈ ವಿಮರ್ಶೆಯನ್ನು ನೋಡಿ, ನನ್ನ ಒಂದೊಂದೇ ಪುಸ್ತಕಗಳು ಇಲ್ಲಿ ಪಠ್ಯಪುಸ್ತಕಗಳಾದರೆ, ಇಂತಹ ವಿಮರ್ಶಕರಯೋಗದಿಂದ ಅವು ಪರಿಶುದ್ಧವೂ, ಪರಿಪುಷ್ಟವೂ ಆಗಬಹುದಲ್ಲವೆ? ಎಂಬ ಆಶೆಯು ನನ್ನಲ್ಲಿ ಉಂಟಾಯಿತು!

೧೧ ಮ|| ರಾ|| ರಾ|| ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ. ಎ., ಕನ್ನಡ ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು—ಈ ಮಹನೀಯರ ಪ್ರತ್ಯಕ್ಷ ಪರಿಚಯವು ಇಲ್ಲಿಗೆ ಬಂದ ಬಳಿಕ ನನಗೆ ಆಗಿದ್ದರೂ, ನನ್ನ ಮಾಸಪತ್ರಿಕೆಗಳಿಗೆ ಈ ವಿದ್ವಾಂಸರು ಬಹು ದಿವಸದಿಂದ ಚಂದಾದಾರರಾಗಿದ್ದಾಗ, ನನ್ನ ವಿಷಯವಾಗಿ ವಹಿಸಿದ್ದ ಇವರ ಆದರ ಭಾವದ ಮೂಲಕ ಇವರ ದೃಢ ಪರಿಚಯವು ಬಹು ದಿವಸಗಳ ಹಿಂದೆಯೇ ನನಗೆ ಆದಂತಾಗಿರುವದು. ಇವರು ಅತ್ಯಂತ ಋಜುಭಾವದವರು, ಸಹೃದಯರು, ಸಾತ್ವಿಕರು! ಒಂದೆರಡು ಸಭೆಗಳಲ್ಲಿ ಇವರು ಮಾಡಿದ ಭಾಷಣಗಳನ್ನು ಕೇಳಿ, ಇಂಥ ಯೋಗ್ಯತೆಯುಳ್ಳವರು ನನ್ನ ಮಾಸಪತ್ರಿಕೆಗೆ ಚಂದಾದಾರರು ಈವರೆಗೂ ಇರುವರಲ್ಲ, ಅದಕ್ಕೆ ಕಾರಣವೇನಿರಬಹುದೆಂಬ ವಿಚಾರವು ನನ್ನಲ್ಲಿ ಉತ್ಪನ್ನವಾಯಿತು! ರಸಿಕ ವಿದ್ವಾಂಸರು ಅನ್ಯರ ರೂಕ್ಷಲೇಖಗಳನ್ನು ರಸಯುಕ್ತವೆಂದು ಭಾವಿಸುವಷ್ಟು ರಸಜ್ಞರು ಇರುವರೆಂಬವರಲ್ಲಿ ಸಂಶಯವಿಲ್ಲ. ಒಟ್ಟಿಗೆ ಕನ್ನಡ ಲೇಖಕರಲ್ಲಿ ಇವರ ಮಮಕಾರ ಬಹಳ. ಇವರ ದರ್ಶನದಿಂದ ಪುನಃ ಸದ್ಗುರು ಮಾಸಪತ್ರಿಕೆಯನ್ನು ಬೇಗನೆ ಪ್ರಕಟಿಸಬೇಕೆಂಬ ಆತುರತೆಯು ನನ್ನಲ್ಲಿ ಉಂಟಾಯಿತು!

೧೨ ಮ||ರಾ||ರಾ||ಎನ್. ಶೇಷಾದ್ರಿಶರ್ಮಾ, ಬಿ.ಎ., ಅ. ಮಾಸ್ತರ, ಗೌರ್ನಮೆಂಟ್ ಹೈಸ್ಕೂಲ್, ಬೆಂಗಳೂರು—ಇವರೊಬ್ಬರು ಅತ್ಯಂತ ಚಿಕಿತ್ಸಕ ಬುದ್ಧಿಯ ಉತ್ಸಾಹಶಾಲಿಗಳಾದ ಗುಣಗ್ರಾಹಿ ತರುಣರು. ಇವರ ಸಂಗಡ ಸಲಿಗೆಯಿಂದ ಮಾಡಿದಷ್ಟು ಚರ್ಚೆಯನ್ನು ನಾನು ಯಾರ ಸಂಗಡಲೂ ಮಾಡಿರುವದಿಲ್ಲ; ಈ ಸರಳಭಾವದ ತರುಣರೊಡನೆ ಈಗಲೂ ನನ್ನ ಚರ್ಚೆಗಳು ನಡೆದೇ ಇರುವವು. ಇವರು ಒಳ್ಳೆಯ ಲೇಖಕರು, ಗ್ರಂಥಾವಲೋಕನ ಶೀಲರು. ಇವರ ಸಹವಾಸದಿಂದ ನನಗೆ ಹಲವು ಹೊಸ ವಿಚಾರ

ಗಳ ಪರಿಚಯುವಾಯಿತು. ಇವರು ದೋಷಗಳನ್ನು ದುರ್ಲಕ್ಷಿಸಿ ಗುಣಗಳನ್ನೇ ಮುಂದೆ ಮಾಡುವವರು ಇವರೊಡನೆ ಮಾಡುವ ಸಂಭಾಷಣದಿಂದಾಗುವ ಲಾಭಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು. ಹಲವು ಬಗೆಗಳಿಂದ ಇವರ ಸಹಾಯುವು ನನಗೆ ಆಗುತ್ತಿರುವದು.

೧೩ ಮ|| ರಾ|| ರಾ|| ದೇವಡು ನರಸಿಂಹಶಾಸ್ತ್ರೀಗಳು ಎಂ, ಎ. ಹೆಡ್ಡಮಾಸ್ತರ ಆರ್ಯನ್ ಮಿಡಲ್‌ಸ್ಕೂಲ ಬೆಂಗಳೂರು—ಇವರು ಅತ್ಯಂತ ತೇಜಸ್ವಿಗಳು, ಉತ್ತಮಲೇಖಕರು, ಒಳ್ಳೇ ವಕ್ತಾರರು! ಇವರ ಕಲಾಭವನ ದಲ್ಲಿಯ ವ್ಯಾಖ್ಯಾನವನ್ನು ಕೇಳಿ ಇವರ ವಿಷಯವಾಗಿ ನನ್ನಲ್ಲಿ ಅತ್ಯಂತ ವಾದ ಆದರಭಾವವು ಉತ್ಪನ್ನವಾಯಿತು. ಇವರ ಎಂ, ಎ. ಪದವಿಯು ಇವರ ಸಂಸ್ಕೃತ ಪಾಂಡಿತ್ಯದಿಂದ ಪರಿಪುಷ್ಟವಾಗಿರುವದು. ಇಂಥವರ ಸಹ ವಾಸವು ನನ್ನಂತಹ ಪಾಮರ ಲೇಖಕರಿಗೆ ಅತ್ಯಂತ ಉಪಕಾರಕವಾದದ್ದು.

೧೪ ಮ|| ರಾ|| ರಾ|| ನಂಗಪುರಂ ವೇಂಕಟೇಶಯ್ಯಂಗಾರ್, ಎಂ,ಎ. ಗೌರವಕಾರ್ಯದರ್ಶಿ ಸಾಹಿತ್ಯಪರಿಷತ್ತು ಬೆಂಗಳೂರು—ಈ ಮಾನ್ಯವರರ ಪರಿಚಯುವು ಸಾಹಿತ್ಯ ಪರಿಷತ್ತಿನಲ್ಲಿ ನನಗೆ ಆಯಿತು. ನನಗೆ ಪರಿಷತ್ತು ಉಚಿತವನ್ನು ಕೊಟ್ಟಿತೆಂದು ಹೇಳುವಾಗ ಈ ಮಹನೀಯರು ಪಟ್ಟ ಆನಂ ದವನ್ನೂ, ತೋರಿಸಿದ ಸಹಾನುಭೂತಿಯನ್ನೂ ನೋಡಿ, ಇವರೊಬ್ಬರು ನನ್ನ ಪರಮ ಆಪ್ತರೆಂಬ ಭಾವನೆಯು ನನಗೆ ಉಂಟಾಯಿತು! ಈ ಭಾವನೆ ಯು ವ್ಯರ್ಥವಾದದ್ದೂ ಆಗಲಿಲ್ಲ. ನನಗೆ ಪುಸ್ತಕ ಪ್ರಿಂಟುಮಾಡಿಸುವದ ಕ್ಕಾಗಿ ಒಂದುನೂರು ರೂಪಾಯಿಗಳ ಅವಶ್ಯಕತೆಯಿರಲು, ತಟ್ಟನೆ ತಮ್ಮಲ್ಲಿ ಯ ನೂರು ರೂಪಾಯಿಗಳನ್ನು ನನಗೆ ಕೊಟ್ಟು ಹಿಂದಿನಿಂದ ನನ್ನ ಕೈಯಿಂದ ಅವನ್ನು ಇಸಿದುಕೊಂಡರು! ದೊಡ್ಡವರ ವಿಚಾರವು ದೊಡ್ಡದೇಸರಿ!

೧೫ ಮ|| ರಾ|| ರಾ|| ಪ್ರೊಫೆಸರ ಬಿ. ಎಂ. ಶ್ರೀಕಂಠಯ್ಯನವರು, ಎಂ, ಎ., ಬಿ, ಎಲ್., ರಿಜಿಸ್ಟ್ರಾರ ಮೈಸೂರು ವಿಶ್ವವಿದ್ಯಾನಿಲಯ — ಈ ಮಹನೀಯರ ಘನವಾದ ಯೋಗ್ಯತೆಯ ಪರಿಚಯವು ನನಗೆ ಕೇಳಿ ಈ ಮೊದಲೇ ಆಗಿದ್ದಿತು; ಆದರೆ ಕರ್ನಾಟಕ ಸಂಘದ ವಾರ್ಷಿಕ ಸಮಾರಂಭದ ಕಡೆಯಲ್ಲಿ ಸೆಂಟ್ರಲ್ ಕಾಲೇಜಿನ ಯೋಗ್ಯತಾ ಸಂಪನ್ನರಾದ ವಿದ್ಯಾರ್ಥಿ

ಗಳು ಮಾಡಿದ "ಗದಾಯುದ್ಧ" ವೆಂಬ ನಾಟಕದ ಪ್ರಯೋಗವನ್ನು ನೋಡಿ ನಾನು ಆನಂದಪರವಶನಾಗಿರುವಾಗ, ಹೀಗೆ ರನ್ನನನ್ನು ಚಿನ್ನದ ಕುಂದಣ ದಿಂದ ಸುಶೋಭಿತನಾಗಮಾಡಿದ ರಸಿಕಶಿಖಾಮಣಿಗಳು ನಮ್ಮ ಸನ್ಮಾನ್ಯ ರಾದ ಶ್ರೀಕಂಠಯ್ಯನವರೇ ಎಂದು ಕೇಳಿ ನಾನು ಪರಿತುಷ್ಟನಾದೆನು; ಆದರೆ ಪ್ರತ್ಯಕ್ಷ ಅವರು ನಾಟಕಕ್ಕೆ ಬಂದಿದ್ದು, ಅವರ ದರ್ಶನ ಲಾಭವಾಗದ್ದಕ್ಕಾಗಿ ನನಗೆ ಚಡಪಡಿಕೆಯಾಯಿತು! ಇಂತಹ ರಸಿಕ ವಿದ್ವಾಂಸರ ಕೃತಿಗಳ ಅವ ಲೋಕನವೇ ಲೇಖಕರ ರಸಪುಷ್ಟಿಯ ಪೇಯವು!

೧೬ ಮ|| ರಾ|| ರಾ|| ಡಿ. ಕೆ. ಭಾರದ್ವಾಜರವರು, ಸಂಪಾದಕ ರಂಗ ಭೂಮಿ—ಈ ಸಾತ್ವಿಕ ದೇಶಭಕ್ತರು ನನ್ನ ಪೂರ್ವಪರಿಚಯದವರು! ಇವರ ಬಳಿಯಲ್ಲಿರುವ ಉತ್ತಮೋತ್ತಮ ಪುಸ್ತಕಸಂಗ್ರಹವನ್ನೂ, ಲೇಖನ ವ್ಯವ ಸಾಯದಲ್ಲಿಯ ಇವರ ಚಿಕಿತ್ಸಕ ಬುದ್ಧಿಯನ್ನೂ, ವ್ಯವಸಾಯ ಬಂಧುಗಳ ವಿಷಯದ ಇವರ ಆದರಭಾವವನ್ನೂ ನೋಡಿ ನನಗೆ ಬಹಳಸಂತೋಷವಾ ಯಿತು. ಇವರು ಇಲ್ಲಿಯ ದೊಡ್ಡವರ ದರ್ಶನಮಾಡಿಸುವದಕ್ಕಾಗಿ ನನ್ನ ಬೆನ್ನುಹತ್ತಿ ಬರಲಿಕ್ಕೂ ಹಿಂದೆಮುಂದೆ ನೋಡಲಿಲ್ಲ. ಇದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು.

ಮ|| ರಾ|| ರಾ|| ಎಸ್. ಗರಲಪುರೀ ಶಾಸ್ತ್ರಿಗಳು, ಎಂ. ಯಸ್. ಸಿ. —ಈ ನಯ-ವಿನಯ ಸಂಪನ್ನ ಮಾನ್ಯವರರ ದರ್ಶನಕ್ಕಾಗಿ ಅವರು ಕೂಡು ವ ಕೋಣೆಗೆ ನನ್ನೊಬ್ಬ ಸನ್ಮಾನ್ಯಮಿತ್ರರೊಡನೆ ನಾನುಹೋದೆನು. ಕೂಡಲೆ ಒಂದು ಪುಸ್ತಕದಮೇಲೆಇಟ್ಟಿದ್ದ ಶ್ರೀ ವಿಘ್ನೇಶ್ವರನ ಶಿಲಾಪ್ರತಿಮೆಯ ದರ್ಶ ನವಾಯಿತು! ಅತ್ತ ಸಹಜವಾಗಿ ಎಡಗಡೆಗೆ ಹೊರಳಿ ನೋಡಲು, ಸಾಕ್ಷಾ ತ್ ಭಗವಂತನ ಸುಂದರ ಪ್ರತಿಮೆಯು ಕೊಳಲು ಹಿಡಿದು ಪ್ರಸನ್ನವದನ ದಿಂದ ಭಕ್ತರನ್ನು ಅನುಗ್ರಹಿಸುತ್ತಿರುವದು ಕಣ್ಣಿಗೆ ಬಿದ್ದಿತು! ಇಂತಹ ಮಂಗಲಮಯ ದೈವೀವಸ್ತುಗಳ ಮುಂಜಾವಿನ ದರ್ಶನದಿಂದ ನನ್ನ ಹೃದ ಯವು ಪ್ರಸನ್ನವಾಗುತ್ತಿರಲು, ಅಷ್ಟರಲ್ಲಿ ಶಾಸ್ತ್ರಿಗಳವರು ಪ್ರಸನ್ನವದನ ರಾಗಿ ಅಲ್ಲಿಗೆ ಬಂದರು. ಆ ದೊಡ್ಡಮನುಷ್ಯರಿಗೆ ನನ್ನ ಮಿತ್ರರು ನನ್ನ ಪರಿ ಚಯವನ್ನು ಇಂಗ್ಲೀಷಿನಿಂದ ಮಾಡಿಕೊಡುತ್ತಿರಲು, ಮುಗ್ಧವಾಗಿ ಹೋಗಿದ್ದ

ನನ್ನ ವೃತ್ತಿಗೆ ಚೇತರಿಸಿಕೊಳ್ಳಲು ಅದೊಂದು ಅವಕಾಶ ದೊರೆತಂತಾಯಿತು. ಆಗ ಉದಾರಹೃದಯದ ಶಾಸ್ತ್ರಿಗಳವರು ತಮ್ಮ ಹಿರಿಯರು ಮಾಡಿದ್ದ ಶೇಷರಾಮಾಯಣದ ೨ನೆಯ ಆವೃತ್ತಿಯ ಸುಂದರ ಪುಸ್ತಕವನ್ನು ಬಹು ಪ್ರೀತಿಯಿಂದ ಅನುಗ್ರಹಿಸಿ ನನಗೆ ಕೊಡುತ್ತಿರುವಾಗ, ನನ್ನ ಹೃದಯವು ಭಕ್ತಿಯ ಉದ್ರೇಕದಿಂದ ಕಂಪಿಸಿತು! ಪರಮಪೂಜ್ಯರಾದ ಕವಿತಿಲಕ ಸೋಸಲೆ ಅಯ್ಯಶಾಸ್ತ್ರಿಗಳವರ ಕೀರ್ತಿಯನ್ನು ಕರ್ನಾಟಕದಲ್ಲಿ ಯಾವ ವಿದ್ವಾಂಸರು ಕೇಳಿರಲಿಕ್ಕಿಲ್ಲ? ನಾವಿಕನ ಕಿವಿಗೂ ಗಾಗಾಭಟ್ಟರ ಕೀರ್ತಿಯು ಮುಟ್ಟಿದ್ದಂತೆ, ಧಾರವಾಡ ಪ್ರಾಂತಸ್ಥನಾದ ನನ್ನಂತಹ ಗಾವಿಲನ ಕಿವಿಗೂ ಆ ಕವಿತಿಲಕರ ಕೀರ್ತಿಯು ನಾನು ವಿದ್ಯಾರ್ಥಿಯಾಗಿದ್ದಾಗಲೇ ಮುಟ್ಟಿತ್ತು! ನಮ್ಮ ತರುಣ ಶಾಸ್ತ್ರಿಗಳವರು ತಾವು ಬರೆದ ಪುಸ್ತಕದ ಹಸ್ತಪ್ರತಿಯ ಪುಡಿಕೆಗಳನ್ನು ಮೇಜಿನಮೇಲೆ ಇಡುತ್ತ ನನ್ನನ್ನು ಕುರಿತು—

ಶಾಸ್ತ್ರಿಗಳು—ನೀವು ಇಲ್ಲಿ ಇನ್ನು ಒಂದು ತಿಂಗಳು ಇರುವಿರಾ?

ಗಳಗನಾಥನು—ಹೌದು.

ಶಾಸ್ತ್ರಿಗಳು—ಈ ಪುಸ್ತಕವನ್ನು ನಿಮ್ಮಮುಂದೆ ಓದಬೇಕಾಗಿದೆ, ನಿಮ್ಮ ಮನೆಗೆ ಬರಬೇಕೆಂದಿದ್ದೇನೆ.

ಗಳಗನಾಥನು—ನನ್ನಮನೆ ಸಣ್ಣದು, ತಮಗೆ ಕುಳಿತುಕೊಳ್ಳಲಿಕ್ಕೆ ಸ್ಥಳವೂ ಇಲ್ಲ. ಅಪ್ಪಣೆಯಾದರೆ ನಾನೇ ಬೇಕಾದಾಗ ಬರುವೆನು.

ಶಾಸ್ತ್ರಿಗಳು—ನಿಮ್ಮಂಥವರ ಮನೆಗೆ ಬರುವದು ದೇವರಗುಡಿಗೆ ಬಂದ ಹಾಗೆ!

ಗಳಗನಾಥನು—ನನ್ನನ್ನು ಸಂಕೋಚಗೊಳಿಸಬಾರದು.

ಶಾಸ್ತ್ರಿಗಳು—ನಿಮ್ಮ ಮನೆಗೆ ಬರುವ ಪುಣ್ಯವನ್ನು ನನಗೆ ಒದಗಿಸಿ ಕೊಡಿರಿ.

ಮಹನೀಯ ವಾಚಕರೇ, ವಿದ್ಯೆಗೆ ವಿನಯವು ದೊಡ್ಡ ಭೂಷಣವಲ್ಲವೆ? ನನ್ನಂತಹ ಗಾವಿಲನ ಸ್ಥಿತಿಯು ಈಗ ಹೇಗಾಗಿರಬಹುದು?

ನನ್ನ ವೃತ್ತಿಯಮೇಲೆ ಎಂತಹ ಸಂಸ್ಕಾರವಾಗಿರಬಹುದು? ಎಂಬದನ್ನು ನಾನೇನು ವರ್ಣಿಸುವೆನು?

ಇಂತಹ ಪಂಡಿತೋತ್ತಮರು ಬೆಂಗಳೂರಲ್ಲಿ ಎಷ್ಟು ಜನರಿರುವರೊ! ಅವರ ನೆಲೆಯು ನಮ್ಮಂತಹ ಪಾಮರರಿಗೆ ಹೇಗೆ ಹತ್ತಬೇಕು? ಅವರೆಲ್ಲರ ದರ್ಶನಮಾಡಿಕೊಳ್ಳಲಿಕ್ಕಾದರೂ ನಾನು ಹೇಗೆ ಸಮರ್ಥನಾದೇನು? ಜ್ಞಾನೋದಧಿಯಲ್ಲಿ ಸ್ವಚ್ಛಂದದಿಂದ ವಿಹರಿಸುವ ಮಹನೀಯರ ಬಳಿಗೆ ಹೋಗುವದಕ್ಕೆ, ಆ ಪವಿತ್ರೋದಧಿಯಲ್ಲಿ ಕಾಲಿಡಲಿಕ್ಕೂ ಅಂಜುತ್ತಿರುವ ಅಂಜುಬುರುಕನು ನಾನು, ಅಂಜಿ ಮನೆಯಲ್ಲಿ ಕುಳಿತುಬಿಟ್ಟಿದ್ದರೆ ಆಶ್ಚರ್ಯವಾದರೂ ಏನು? ಈ ವರೆಗಿನ ಜ್ಞಾನಿಗಳ ದರ್ಶನಮಾಡಿಕೊಂಡದ್ದಾದರೂ ಅವರ ಪೂರ್ವ ಪರಿಚಯದ ಆಸರದಿಂದ, ಅಥವಾ ಪೂರ್ವ ಪರಿಚಯದ ಮಹನೀಯರು ನನ್ನನ್ನು ಕೈಹಿಡಿದು ಕರೆದುಕೊಂಡು ಹೋದದ್ದರಿಂದ! ಬೆಂಗಳೂರ ಈ ವಿದ್ವತ್ಸಮಾಗಮದ ವೈಪುಲ್ಯಕ್ಕಾಗಿಯೇ ನನಗೆ ಬೆಂಗಳೂರನ್ನು, ಅರ್ಥಾತ್ ಆ ವಿದ್ವಜ್ಜನರ ಸೌಜನ್ಯವನ್ನು ಬಿಟ್ಟು ಹೋಗುವಹಾಗೆ ಆಗಲೊಲ್ಲದು!

ನಮ್ಮ ಬೆಂಗಳೂರ ಕನ್ನಡ ಭಾಷಾಭಿಮಾನಿಗಳಾದ ಪಂಡಿತರು ಗುಣಲೇಶಕ್ಕಾದರೂ ಎಷ್ಟು ಕ್ಷಿಪ್ರದಲ್ಲಿ ಪರಿತುಷ್ಟರಾಗುವರೆಂಬದನ್ನು, ಅವರು ಒಂದು ಕೇಳಿದರೆ ಎರಡು ಕೊಡುವಷ್ಟು ಉದಾರ ಹೃದಯದವರು ಹೇಗಿರುವರೆಂಬದನ್ನು ತೋರಿಸುವದಕ್ಕಾಗಿ ನಾನು ಸಾಹಿತ್ಯ ಪರಿಷತ್ತಿಗೆ ಕಳಿಸಿದ್ದ ಅರ್ಜಿಯನ್ನೂ, ಅದಕ್ಕೆ ಪರಿಷತ್ತು ದಯಪಾಲಿಸಿರುವ ಉತ್ತರವನ್ನೂ ಇದರ ಕೆಳಗೆ ಕೊಡುವೆನು!

ಮ|| ರಾ|| ರಾ|| ಬೆಂಗಳೂರ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳ ಸನ್ನಿಧಿಯಲ್ಲಿ—

ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ ಸದ್ಗುರು ಮಾಸಪತ್ರಿಕೆಯ ಸಂಪಾದಕ, ಹಾವೇರಿ. ಈತನ ವಿನಯಪೂರ್ವಕ ವಿನಂತಿಯು—

ತಮ್ಮ ಪರಿಷತ್ತಿನಿಂದ ಯೋಗ್ಯ ಪುಸ್ತಕಗಳಿಗೆ ಉತ್ತೇಜನವು ದೊರೆಯುವದೆಂಬದನ್ನು ಕೇಳಿ ಈಗ ನಾನು "ಮಾಧವ ಕರುಣಾವಿಲಾಸ" ವೆಂಬ

ಹೆಸರಿನ ಪುಸ್ತಕವನ್ನು ತಮ್ಮ ಸಂಸ್ಥೆಯ ಪರೀಕ್ಷಣಕ್ಕಾಗಿ ಕಳಿಸಿರುವೆನು. ಅವಲೋಕನವಾಗಿ, ಪುಸ್ತಕವು ಯೋಗ್ಯವಾಪದ್ದೆಂದು ತೋರಿದಲ್ಲಿ ಬಹುಮಾನಿಸಬಹುದು.

ಸಾಹಿತ್ಯ ಪರಿಷತ್ತಿನಂತಹ ಗೌರವದಸಂಸ್ಥೆಯಿಂದ ಬಹುಮಾನಪಡೆದಯುವದೊಂದು ಗ್ರಂಥಕಾರರಿಗೆ ಗೌರವದ ಸಂಗತಿಯಾಗಿರುವಂತೆ, ಯೋಗ್ಯ ಗ್ರಂಥಗಳನ್ನು ಮನ್ನಿಸುವ ಭಾಗ್ಯವ ಪಡೆಯುವದೂ ಪರಿಷತ್ತಿಗೆ ಗೌರವದ ಸಂಗತಿಯಾಗಿರುವದೆಂದು ನಾನು ತಿಳಿದಿರುವೆನು.

ನಾನು ಇಪ್ಪತ್ತು ಮೂವತ್ತು ವರ್ಷಗಳಿಂದ ಯಥಾಮತಿ ಭಾಷಾಸೇವೆಯನ್ನು ಮಾಡತೊಡಗಿ ೨೫-೩೦ ಪುಸ್ತಕಗಳನ್ನು ಬರೆದಿರುವೆನು. ನನ್ನ ಈ ದೀರ್ಘಕಾಲದ ಲೇಖನ ವ್ಯವಸಾಯದ ಪರಿಪಾಕವು ಈ "ಮಾಧವ ಕರುಣಾವಿಲಾಸ" ವಾಗಿರುವದೆಂದು ವಿನಯದಿಂದ ಅರಿಕೆಮಾಡಿಕೊಳ್ಳುವೆನು.

ಲೋಕಾದರಕ್ಕೆ ಅತ್ಯಂತ ಪಾತ್ರವಾಗಿರುವ ಈ ಪುಸ್ತಕಕ್ಕೆ ತಮ್ಮಲ್ಲಿಯ ದೇವರಾಜ ಚಾರ್ಟಿ ಫಂಡಿನಿಂದಲೂ, ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದಿಂದಲೂ ಬಹುಮಾನವು ದೊರೆತು, ಮುಂಬಯಿ ವಿದ್ಯಾಪೀಠದ ಆದರದ ಭಾಗ್ಯವು ಪ್ರಾಪ್ತವಾಗಿ ನನ್ನ ಶ್ರಮದ ಸಾರ್ಥಕತೆಯ ನಿದರ್ಶನವಾಗಿರುವದು. ಅದರಂತೆ ಅತ್ಯಂತ ಗೌರವಶಾಲಿಯಾದ ತಮ್ಮ ಪರಿಷತ್ತಿನಿಂದಲೂ ನನ್ನ ಶ್ರಮದ ಸಾರ್ಥಕತೆಯ ನಿದರ್ಶನವಾಗಿ ಲೇಖನ ವ್ಯವಸಾಯಕ್ಕೆ ಪ್ರೋತ್ಸಾಹವು ಉಂಟಾದೀತೆಂದು ನಾನು ಭಾವಿಸಿರುವೆನು.

ಇದೊಂದು ಸ್ವತಂತ್ರ ರಚನೆಯ ಐತಿಹಾಸಿಕ ಸರಸ ತಾತ್ವಿಕ ಕಾದಂಬರಿಯಾಗಿರುವದು. ಶ್ರೀಮದ್ವಿದ್ಯಾರಣ್ಯ ಸ್ವಾಮಿಗಳೆಂಬ ಹೆಸರಿನಿಂದ ಜಗಪ್ರಸಿದ್ಧರಾದ ಪೂರ್ವಾಶ್ರಮದ "ಮಾಧವಾಚಾರ್ಯ" ರೆಂಬ ಹೆಸರಿನ ವಿದ್ವನ್ಮುಕುಟಮಣಿ ಶ್ರೇಷ್ಠ ತಪಸ್ವಿಗಳು ಈ ಕಾದಂಬರಿಯ ನಾಯಕರಾಗಿದ್ದು, ಇದರಲ್ಲಿ ಲೋಕಜಾಗ್ರತಿಗೂ, ರಾಷ್ಟ್ರೈಕ್ಯಕ್ಕೂ ಅತ್ಯಂತ ಸಹಾಯಕಾರಕಗಳಾಗಿರುವ ವಿವಿಧ ವಿಷಯಗಳ ವಿವೇಚನವು, ಆ ಮಹನೀಯ ವಿಭೂತಿಗಳ ಮುಖದಿಂದ ಸರಸವಾಗಿ ಮಾಡಲ್ಪಟ್ಟಿರುವದು. ಅದರಂತೆ, ಮನೋರಂಜನದ ದೃಷ್ಟಿಯಿಂದಲೂ, ಸ್ಫೂರ್ತ್ಯುತ್ಪಾದನದ ದೃಷ್ಟಿಯಿಂ

ದಲೂ, ಉದಾತ್ತಗುಣ ಪೋಷಣದ ದೃಷ್ಟಿಯಿಂದಲೂ ಈ ಕಾದಂಬರಿಯು ಶ್ರೇಷ್ಠತರವಾಗಿರುವದೆಂದು ಲೋಕವು ಒಪ್ಪಿಕೊಳ್ಳುತ್ತಿರುವದು.

ಈ ಕಾದಂಬರಿಯನ್ನು ಇಷ್ಟರಲ್ಲಿಯೇ ತಮ್ಮ ಪರಿಷತ್ತಿನ ಪರೀಕ್ಷಣಕ್ಕಾಗಿ ಕಳಿಸಬಹುದಾಗಿತ್ತು; ಆದರೆ ನನ್ನ ಈ ಕೃತಿಯು ಯೋಗ್ಯವಾದದ್ದೆಂದು ಲೋಕಾನುಭವದಿಂದಲೂ, ಸಂಸ್ಥೆಗಳ ಪರೀಕ್ಷಣದಿಂದಲೂ ನಿರ್ಣಯಿಸಲ್ಪಡುವವರೆಗೆ, ತಮ್ಮ ಸಂಸ್ಥೆಯಂತಹ ಶ್ರೇಷ್ಠ ವಿದ್ವತ್ಸಂಘ ಸೇವಿತ ಸಂಸ್ಥೆಯ ಪರೀಕ್ಷಣಕ್ಕೆ ಕಳಿಸಲು ಮನಸ್ಸಾಗದ್ದರಿಂದ ಬಿಟ್ಟೆನು.

ತಮ್ಮಂಥ ಹಲವು ಶ್ರೇಷ್ಠತರ ಸಂಸ್ಥೆಗಳಿಂದ ಗ್ರಂಥಗಳು ಮಾನ್ಯವಾದ ಮಾನದಿಂದ ಅವುಗಳ ಅವಲೋಕನಕ್ಕೆ ಲೋಕವು ಆತುರಪಡುವದು ಸ್ವಾಭಾವಿಕವು; ಆದ್ದರಿಂದ ನನ್ನ ಈ ಕಾದಂಬರಿಯು ಏನಾದರೂ ಹಿತಕಾರಕ ಲೋಕ ಜಾಗ್ರತಿಯನ್ನು ಮಾಡೀತೆಂದು ತಮ್ಮ ಸಂಸ್ಥೆಗೆ ತೋರಿದ ಪಕ್ಷದಲ್ಲಿ, ಪ್ರತಿ ಒಬ್ಬ ಸಾಕ್ಷರ ಕನ್ನಡಿಗನು ಅದನ್ನು ಓದಲು ಉತ್ಸುಕನಾಗುವದಕ್ಕಾಗಿ ತಮ್ಮ ಆ ಕರ್ನಾಟಕ ಹಿತ ತತ್ಪರ ಸಂಸ್ಥೆಯು ಇದನ್ನು ಯೋಗ್ಯ ಕಂಡಲ್ಲಿ ಬಹುಮಾನಿಸಬೇಕೆಂದು ಪ್ರಾರ್ಥಿಸುವೆನು.

ಬಸವನಗುಡಿ, ಬೆಂಗಳೂರು }
ತಾ|| ೨೨-೧೦-೨೭ } ಕನ್ನಡಿಗರ ಸೇವಕ
ವೇಂಕಟೇಶ ತಿ. ಕುಲಕರಣಿ, ಗಳಗನಾಥ.

ಇದಕ್ಕೆ ಉತ್ತರ:—

ನಂ. ೨೭೧೫

ಕರ್ನಾಟಕ ಸಾಹಿತ್ಯ ಪರಿಷತ್ತು
ಬಸವನಗುಡಿ, ಬೆಂಗಳೂರು.
೧೦-೧೧-೧೯೨೭

ಮ|| ರಾ|| ರಾ|| ವೇಂಕಟೇಶ ತಿರಕೋ ಕುಲಕರಣಿ ಗಳಗನಾಥರವರ ಸಮಕ್ಷಮಕ್ಕೆ.

ಸಾಹಿತ್ಯ ಪರಿಷತ್ಕಾರ್ಯದರ್ಶಿಯ ವಿಜ್ಞಾಪನೆಗಳು—

ತಮ್ಮ ಕಳೆದ ತಿಂಗಳ ೨೨ನೇ ತಾರೀಖಿನ ಕಾಗದವು ಮುಟ್ಟಿತು. ಅದನ್ನು ಕಾರ್ಯ ನಿರ್ವಾಹಕ ಮಂಡಲಿಯವರ ಪರ್ಯಾಲೋಚನೆಗೆ ಕಳೆದ ತಿಂಗಳ ೩೦ನೇ ತಾರೀಖಿನ ದಿನ ತಂದೆನು. ಆ ಮಂಡಲಿಯವರು

ಕೆಳಗೆ ಗುರುತಿಸಿರುವ ನಿರ್ಣಯವನ್ನು ಮಾಡಿ ಅದನ್ನು ತಮ್ಮ ಪರಾಮರಿಕೆಗೆ ತರಬೇಕೆಂದು ತಿಳಿಸಿರುತ್ತಾರೆ. ಆ ಪ್ರಕಾರ ನಿರ್ಣಯವನ್ನು ತಮಗೆ ತಿಳಿಸಲು ಬಹಳ ಸಂತೋಷಪಡುತ್ತೇನೆ.

"ಮ|| ರಾ|| ಗಳಗನಾಥರವರು ಕನ್ನಡ ಭಾಷೆಯಲ್ಲಿ ಅನೇಕ ಪ್ರೌಢ ಗ್ರಂಥಗಳನ್ನು ರಚಿಸಿ ಅವುಗಳನ್ನು ಪ್ರಕಟಿಸಿ ಅವರು ಮಾಡಿರುವ ಕರ್ನಾಟಕ ವಾಙ್ಮಯ ಸೇವಾತಿಶಯಕ್ಕಾಗಿ ಅವರಿಗೆ ಎರಡುನೂರಾ ಐವತ್ತು ರೂಪಾಯಿಗಳ ಸಂಭಾವನೆಯನ್ನು ಕೊಡತಕ್ಕದ್ದು.

ಇತಿ,

ನಂಗಪುರಂ ವೇಂಕಟೇಶಯ್ಯಂಗಾರ್.

ಗೌ. ಕಾರ್ಯದರ್ಶಿ.

ನಾನು ಒಂದು ಪುಸ್ತಕದ ಪ್ರಾಶಸ್ತ್ಯಕ್ಕಾಗಿ ಪರಿಷತ್ತನ್ನು ಬೇಡಿಕೊಂಡಿರಲು, ಹೀಗೆ ನನ್ನ ಕಾರ್ಯವನ್ನೇ ಗೌರವಿಸಿ ಸಂಭಾವಿಸುವದೆಂದರೆ, ಒಂದು ಕೇಳಿದರೆ ಎರಡು ಕೊಟ್ಟ ಹಾಗೆಯಲ್ಲವೆ? ಉದಾರ ಚರಿತರ ಸ್ವಭಾವವೇ ಅಂತಹದು!



## ೫ ಗಳಗನಾಥನ ಪುಸ್ತಕಗಳು

ಕರ್ನಾಟಕವು ಪ್ರಾಮುಖ್ಯವಾಗಿ ನನ್ನನ್ನು ಕಾದಂಬರಿಕಾರನೆಂದು ಗುರುತಿಸುತ್ತಿರುವದು ನನಗೆ ಅಭಿಮಾನದ ಸಂಗತಿಯು. ಆದರೂ ನನ್ನ ಮನಸ್ಸಿನ ಒಲವು ನೈತಿಕ-ಧಾರ್ಮಿಕ ಸುಲಭ ತತ್ವದ ವ್ಯವಹಾರೋಪಯುಕ್ತ ವಿಷಯಗಳ ಕಡೆಗೆ ವಿಶೇಷವಾಗಿ ಇರುವದು, ಈ ಮಾತಿನ ಖುಣುಕನ್ನು "ಸತ್ವಸಾರ" "ಕುಮುದಿನಿ" ಯಂತಹ ನನ್ನ ಸ್ವತಂತ್ರ ಕಾದಂಬರಿಗಳಲ್ಲಿ ಅಲ್ಲಲ್ಲಿ ನೋಡಬಹುದಾಗಿದ್ದರೂ, "ಮಾಧವ ಕರುಣಾವಿಲಾಸ" ವೆಂಬ ನನ್ನ ವಿಸ್ತೃತವಾದ ಸ್ವತಂತ್ರ ಕಾದಂಬರಿಯ ಮಧ್ಯದಲ್ಲಿರುವ ಇಪ್ಪತ್ತೈದು ಪ್ರಕರಣಗಳು ಈ ಮಾತಿಗೆ ಸಾಕ್ಷಿಯನ್ನು ಕೊಡಬಹುದು. ಅಲ್ಲದೆ, ನನ್ನ ರೂಪಾಂತರದ, ಅಥವಾ ಭಾಷಾಂತರದ ಉಳಿದ ಕಾದಂಬರಿ

ಗಳಲ್ಲಿಯೂ ಅಲ್ಲಲ್ಲಿ ಸುಲಭ ಬೋಧಪ್ರದ ವಿಷಯುಗಳನ್ನು ಬುದ್ಧಿಪೂರ್ವಕ ನಾನು ಸೇರಿಸಿರುವೆನು. ನನ್ನ ಕಾದಂಬರಿಗಳಲ್ಲಿ ಬಹುತರ ಒಬ್ಬ ಸತ್ಪುರುಷನು ಇದ್ದೇ ಇರುವನು. ಆತನ ಯೋಗದಿಂದ ಸದ್ಬೋಧಗಳ ಲಾಭವು ವಾಚಕರಿಗೆ ಆಗುತ್ತಿರುತ್ತದೆ. ಕಾದಂಬರಿಗಳ ಹೊರತು ನಾನು ಬರೆದ ಉಪಯುಕ್ತ ಪ್ರಬಂಧಗಳೆಂದರೆ "ದಾಂಪತ್ಯ" "ಕುಟುಂಬ" "ನಿರ್ಯಾಣ ಮಹೋತ್ಸವ" "ಕನ್ಯಾಶಿಕ್ಷಕ" ಎಂಬ ಚಿಕ್ಕ ಪುಸ್ತಕಗಳು. ಇವಲ್ಲದೆ ಗೃಹಶಿಕ್ಷಣ, ನಮ್ಮ ದೇವರಪೂಜೆ, ದುಡ್ಡು, ಕಲಿತಾಂಡನ ಮೊದಲಾದ ಹತ್ತಿಪ್ಪತ್ತು ಸ್ಫುಟಲೇಖಗಳನ್ನು ಬರೆದಿರುವೆನು. ಮನಸ್ಸಿದ್ದರೂ ಹೆಚ್ಚಿನ ದೊಡ್ಡ ಪ್ರಬಂಧಗಳನ್ನು ಬರೆಯಲಿಕ್ಕೆ ನನಗೆ ಆಸ್ಪದವು ದೊರೆಯಲಿಲ್ಲ; ಯಾಕಂದರೆ ವೈದಿಕ ಪಾಠಶಾಲೆಯು ಪ್ರತಿ ತಿಂಗಳ ಸಾವಿರ ರೂಪಾಯಿಗಳ ವರೆಗಿನ ವೆಚ್ಚಕ್ಕೆ ಹಣವನ್ನು ಒದಗಿಸಿಕೊಡುವದಕ್ಕಾಗಿ ಕಾದಂಬರಿಗಳಿಗೆ ನನ್ನನ್ನು ಮಾರಿಕೊಳ್ಳಬೇಕಾಯಿತು! ನನ್ನ ಈ ಇಪ್ಪತ್ತು ವರ್ಷದ ಕಾದಂಬರೀ ಲೇಖನದಿಂದ ಕರ್ನಾಟಕದಲ್ಲಿ ವಾಚನಾಭಿರುಚಿಯು ಹೆಚ್ಚಿರುವದೆಂದು ಕನ್ನಡಿಗರ ಭಾವನೆಯಾದದ್ದನ್ನು ನಾನು ಕಿವಿಯಿಂದ ಕೇಳಿದ್ದೆನು; ಆದರೆ ಈಗ ಎರಡು ವರ್ಷಗಳಿಂದ ಊರೂರಿಗೆ ಹೋಗಿ ಪುಸ್ತಕ ಮಾರುತ್ತಿರುವಾಗ, ಹಳ್ಳಿಪಳ್ಳಿಗಳಲ್ಲಿಯೂ ನನ್ನ ಪುಸ್ತಕಗಳು ಇರುತ್ತಿರುವದನ್ನೂ, ಸಾಧಾರಣವಾಗಿ ಅಕ್ಷರಸ್ಥರಾದವರು ನನ್ನ ಒಂದಿಲ್ಲೊಂದು ಕಾದಂಬರಿಯನ್ನು ಓದಿರುವದನ್ನೂ ನೋಡಿ ನನಗೆ ಬಹಳ ಸಮಾಧಾನವಾಗುತ್ತಿರುವದು. ಈ ಮಾತಿನ ಅನುಭವವು ಬೆಂಗಳೂರಲ್ಲಿಯೂ ಪುಸ್ತಕ ಮಾರುತ್ತಿರುವ ನಮ್ಮವರಿಗೆ ಬಂದಿರುತ್ತದೆ. ಒಟ್ಟಿಗೆ ಕಾದಂಬರೀ ಲೇಖನದಿಂದ ಗಳಗನಾಥನು ಎಲ್ಲರ ಪರಿಚಯಸ್ಥನಾಗಿರುವನು. ಹಿಂದೆ ಯೊಮ್ಮೆ ಹೇಳಿದಂತೆ, ನನ್ನ ಸದ್ಬೋಧ ಚಂದ್ರಿಕೆಯೆಂಬ ಮಾಸಪತ್ರಿಕೆಗೆ ಏಳುಸಾವಿರ ಜನ ಚಂದಾದಾರರು ಕೂಡಿದ್ದಾಗ, ಕನ್ನಡಿಗರಿದ್ದ ಕರ್ನಾಟಕದ ಹೊರಗಿನ ಪ್ರಾಂತಗಳಲ್ಲಷ್ಟೇ ಅಲ್ಲ, ಹಿಂದುಸ್ಥಾನದ ಹೊರಗಿನ ಸ್ಥಳವಾದ ಏಡನದಲ್ಲಿಯೂ ಚಂದ್ರಿಕೆಯದೊಂದು ಪ್ರತಿಯು ಹೋಗುತ್ತಿದ್ದದ್ದು ಅಭಿಮಾನದ ಸಂಗತಿಯೇ ಸರಿ! ಅಲ್ಲದೆ ಈ ಮೈಸೂರ ಪ್ರಾಂತದಲ್ಲಿ

ಮೆಟ್ರಿಕ್ಕಿಗೆ ಹಚ್ಚಿದ ನನ್ನ "ಧರ್ಮರಹಸ್ಯ" "ಕುಮುದಿನಿ" ಎಂಬೆರಡು ಕಾದಂಬರಿಗಳನ್ನು ವಿದ್ಯಾರ್ಥಿಗಳು ನಾಟಕರೂಪದಿಂದ ಪ್ರಯೋಗಮಾಡಿದ್ದು ಬಹು ಸಮಾಧಾನದ ಸಂಗತಿಯು!

ನನ್ನ ಕಾದಂಬರಿಗಳು ಇಷ್ಟು ಲೋಕಪ್ರಿಯವಾದದ್ದರ ಗುಟ್ಟನ್ನು ನಾನು ಈಗ ಹೇಳದೆ ಇರಲಾರೆನು. ಅಪ್ರಸಿದ್ಧ ನಾಯಕರಿದ್ದ ಕಾದಂಬರಿಗಳನ್ನು ಈವರೆಗೆ ನಾನು ಬರೆಯಲೇ ಇಲ್ಲ. ನನ್ನ ಕಾದಂಬರಿಗಳೊಳಗಿನ ನಾಯಕರೆಂದರೆ—"ವಿಜಯನಗರದ ರಾಜ್ಯಸ್ಥಾಪಕರಾದ ಮಾಧವಾಚಾರ್ಯರು, ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿ, ಅಕಬರನ ಕಾಲದಲ್ಲಿಯೂ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡ ಮಹಾರಾಣಾ ಪ್ರತಾಪಸಿಂಹ, ಸುಪ್ರಸಿದ್ಧ ಪ್ರಾಚೀನ ಚಕ್ರವರ್ತಿಗಳಾದ ಅಶೋಕ-ಚಂದ್ರಗುಪ್ತರು, ಔರಂಗಜೇಬನಿಗೂ ತನ್ನ ಕೈತೋರಿಸಿದ ಸಾಧ್ವೀ ಚಂದ್ರಾವತೀ ರಾಣಿ, ಔರಂಗಜೇಬನ ಕಾಲದಲ್ಲಿಯೂ ಸ್ವಾತಂತ್ರ್ಯವನ್ನು ಸ್ಥಾಪಿಸಿದ ಛತ್ರಸಾಲ, ಕ್ಷತ್ರಿಯೋತ್ತಮನಾದ ರಾಣಾ-ರಾಜಸಿಂಹ, ತಾಳೀಕೋಟಿಯ ಕಾಳಗದ ರಾಮರಾಜ" ಮುಂತಾದ ಪ್ರಸಿದ್ಧ ಐತಿಹಾಸಿಕ ಪುರುಷರು! ಇವರಹೆಸರುಗಳನ್ನು ಕೇಳಿದ ಮಾತ್ರದಿಂದಲೇ ಜನರ ಮನಸ್ಸಿನಲ್ಲಿ ಆದರ-ಭಕ್ತಿಗಳು ಉತ್ಪನ್ನವಾಗುವವು. ಇಂಹತ ಪ್ರಸಿದ್ಧ ಐತಿಹಾಸಿಕ ಪುರುಷರಿಗೆ ಸಂಬಂಧಿಸಿದ ಪ್ರಸಂಗಗಳಿಂದಲೇ ವಾಚಕರಲ್ಲಿ ಉದಾತ್ತಗುಣಗಳ ಬೀಜಾರೋಪಣ-ಪೋಷಣ-ಸಂವರ್ಧನಗಳು ಆಗುವವೆಂದು ನನ್ನ ನಂಬಿಗೆ. ಈ ನಂಬಿಗೆಯ ಮೂಲಕವಾಗಿಯೇ ಈವರೆಗೆ ನಾನು ಅಪ್ರಸಿದ್ಧರಾದ • ಕಲ್ಪಿತ ಸಾಮಾನ್ಯ ಜನರು ನಾಯಕರಾಗಿದ್ದ ಸಾಮಾಜಿಕ ಕಾದಂಬರಿಗಳನ್ನು ಒಂದೂ ಬರೆಯದಿರುವದು. ಇನ್ನು ನಾನು ಬರೆದಿರುವ ಕಾಲ್ಪನಿಕ ಕಾದಂಬರಿಯೆಂದರೆ, ನಾನುಮಟ್ಟಮೊದಲು ಬರೆದ "ಪ್ರಭುದ್ಧ ಪದ್ಮನಯನೆ" ಯೆಂಬದೊಂದೇ ಒಂದು ಕಾದಂಬರಿಯು. ಅದರ ಐದು ಆವೃತ್ತಿಗಳು ಮುಗಿದುಹೋಗಿ ಆರನೆಯ ಆವೃತ್ತಿಯನ್ನು ಈಗ ಹೊರಡಿಸಬೇಕಾಗಿದೆ! ಇರಲಿ, ಒಟ್ಟಿಗೆ ನನ್ನ ಕಾದಂಬರಿಗಳು ಇಷ್ಟು ಲೋಕಪ್ರಿಯವಾಗಲಿಕ್ಕೆ ಪ್ರಸಿದ್ಧ ಐತಿಹಾಸಿಕ ಪುರುಷರೇ ನಾಯಕರಾಗಿದ್ದ ಕಾದಂಬರಿಗಳನ್ನು ನಾನು ಬರೆದದ್ದು ಒಂದನೆಯ ಕಾರಣವು.

ಇನ್ನು ನನ್ನ ಕಾದಂಬರಿಗಳ ಲೋಕಪ್ರಿಯತೆಯ ಎರಡನೆಯ ಕಾರಣವೆಂದರೆ, ನಾನು ಭಾಷಾಪ್ರಭುತ್ವವನ್ನೂ, ವಿಷಯಯೋಜಕತೆಯ ಪ್ರಭುತ್ವವನ್ನೂ ಕಾಯ್ದುಕೊಂಡು ಕಾಂದಂಬರಿಗಳನ್ನು ಬರೆದದ್ದು. ಯಾವಪ್ರಾಂತದ ಭಾಷೆಯ ಅಧಿಕಾರಕ್ಕೂ ನಾನು ಒಳಗಾದವನಲ್ಲ. ನಾನು ನನ್ನ ಯೋಗ್ಯತೆಯಂತೆ ಬೇರೆಬೇರೆ ಪ್ರಾಂತಗಳ ಪ್ರಸಿದ್ಧಲೇಖಕರ ಕನ್ನಡ ಗ್ರಂಥಗಳನ್ನು ಓದುವಾಗ ನನ್ನಲ್ಲುಂಟಾದ ಭಾಷೆಗಳ ಪರಿಪಾಕನ ಸ್ವಾಭಾವಿಕವಾದ ಪ್ರಭುತ್ವದಿಂದ ನಾನು ಕಾದಂಬರಿಗಳನ್ನು ಬರೆದಿರುವೆನು. ನಾನು ಭಾಷೆಯ ಏಕೀಕರಣದ ಗೊಡವೆಗೂ ಹೋದವನಲ್ಲ; ಭಾಷೆಯ ಸಂಕರೀಕರಣದ ಗೊಡವೆಗೂ ಹೋದವನಲ್ಲ. ಭಿನ್ನ ಭಿನ್ನ ಭಾಷಾಸರಣಿಗಳ ಸುಪರಿಣಾಮದಿಂದ ನನ್ನ ಹುಟ್ಟಭಾಷೆಯಲ್ಲಾದ ಸಂಜೀವನೀಕರಣದ ಭಾಷೆಯಿಂದ ನಾನು ಕಾದಂಬರಿಗಳನ್ನು ಬರೆದಿರುತ್ತೇನೆ. ತಿರುಗಿ ಕೇಳಿದರೆ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ನನ್ನ ಭಾಷಾಸರಣಿಯಾಗಲಿ, ನನ್ನ ಭಾಷಾ ಪಾಂಡಿತ್ಯ-ಪ್ರಾವಿಣ್ಯಗಳಾಗಲಿ ಕಾರಣಗಳಲ್ಲವೇ ಅಲ್ಲ. ಕೆಲವು ಪ್ರಾಂತಗಳಲ್ಲಿ ಕೆಲಮಟ್ಟಿಗೆ, ಕೆಲವು ಪ್ರಾಂತಗಳಲ್ಲಿ ಬಹು ಮಟ್ಟಿಗೆ, ಕೆಲವು ಪ್ರಾಂತಗಳ ಸರ್ವಾಂಶದಿಂದ ನನ್ನ ಭಾಷೆಯು ಲೋಕಪ್ರಿಯವಾಗಿದ್ದರೂ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ಆ ಭಾಷಾಮಾನ್ಯತೆಯು ಗೌಣಕಾರಣವೇಸರಿ, ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮುಖ್ಯ ಕಾರಣವೆಂದರೆ, ಸಮಾಜವು ಮೆಚ್ಚುವಂತಹ ಕಾದಂಬರಿಗಳನ್ನೇ ಆರಿಸಿ, ಆಕಾದಂಬರಿಗಳಲ್ಲಿಯ ವಿಷಯಗಳ ಯೋಜನೆಯನ್ನು ವಾಚಕರ ಅನುಭವಕ್ಕೆ ನಡುವಂತೆ ಸಮರ್ಪಕವಾಗಿಯೂ, ಸುಂದರವಾಗಿಯೂ ಅಚ್ಚುಕಟ್ಟಿನಲ್ಲಿ ಮಾಡಿದ್ದು! ಲೇಖಕನು ಆರಿಸಿಕೊಂಡ ವಿಷಯಗಳ ಸೌಷ್ಟವದಲ್ಲಿ ಅವನ ಭಾಷೆಯ ಹುಳುಕುಗಳು ಮುಚ್ಚಿಹೋಗುವವೆಂಬದನ್ನು ನಾನು ಅನುಭವದಿಂದ ಅರಿತಿರುವೆನು.

ಇನ್ನು ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮೂರನೆಯ ಕಾರಣವೆಂದರೆ, ನಾನು ವಾಚಕರಲ್ಲಿ ಏಕೀಭವಿಸಿ ಕಾದಂಬರಿಗಳನ್ನು ಬರೆದದ್ದು. ನಾನು ವಾಚಕರಿಗಿಂತ ಶ್ರೇಷ್ಠನೆಂದಾಗಲಿ, ವಾಚಕರಿಗಿಂತ ಕನಿಷ್ಠನೆಂದಾಗಲಿ ತಿಳಿದು ಕಾದಂಬರಿಗಳನ್ನು ಬರೆದಿರುವದಿಲ್ಲ. ಬರೆಯುವಾಗ ನಾನು

ವಾಚಕರಾಗಿರುವೆನು, ಓದುವಾಗ ವಾಚಕರು ಗಳಗನಾಥರಾಗುವರು. ಇದರಿಂದ ಗಳಗನಾಥನ ಮೆಚ್ಚಿಗೆಯೇ ವಾಚಕರ ಮೆಚ್ಚಿಕೆಯಾಗಿರುವದು. ಗಳಗನಾಥನು ಒಳ್ಳೆಯದೆಂದು ಬರೆದ ಕಾದಂಬರಿಯು ಗಳಗನಾಥನ ವಾಚಕರಿಗೆ ಎಂದೂ ಕೆಟ್ಟದಾಗಿಯೇ ಇಲ್ಲ. ಇಷ್ಟು ಸ್ವಾವಲಂಬನದಿಂದ ನಾನು ಕಾರಂಬರಿಗಳನ್ನು ಬರೆದವನು. ನನ್ನ ಸ್ವಂತದ ಕಾದಂಬರಿಗಳಲ್ಲಂತು ನನ್ನ ಸ್ವಾವಲಂಬನವಿರುವದು ಸ್ವಾಭಾವಿಕವು; ಆದರೆ ಎಂತಹ ಪ್ರಸಿದ್ಧ ಕಾದಂಬರಿಕಾರರ ಕಾದಂಬರಿಗಳಿದ್ದರೂ, ಅವು ನನ್ನ ಹೃದಯವನ್ನು ಅಲ್ಲಾಡಿಸದಿದ್ದರೆ ಅಂತಹವನ್ನು ನನ್ನ ಕನ್ನಡಿಗರ ಕಣ್ಣುಮುಂದೆ ನಾನು ಇಟ್ಟಿರುವದೇ ಇಲ್ಲ! ಮೊದಲು ನನ್ನ ಸಮಾಧಾನ, ಆಮೇಲೆ ನನ್ನ ವಾಚಕರ ಸಮಾಧಾನ! ನನ್ನ ಕಣ್ಣುಗಳಲ್ಲಿ ನೀರುಗಳನ್ನು ಉದುರಿಸಿದ ಕಾದಂಬರಿಗಳು ನಮ್ಮ ವಾಚಕರ ಕಣ್ಣುಗಳಲ್ಲಿ ನೀರು ಉದುರಿಸದೆ ಬಿಟ್ಟಿರುವದೇ ಇಲ್ಲ. ಇದೇ ಮಾತು ನನ್ನ ಹಾಗು ನನ್ನ ವಾಚಕರ ಎಲ್ಲ ವಿಚಾರ-ವಿಕಾರಗಳಿಗೂ ಹತ್ತುವದು ! ನನ್ನ ಆಯುಷ್ಯದಲ್ಲಿ ನಾನು ಕೈ. ವಾ. ಆಪಟೆಯವರ "ಕಮಲಕುಮಾರಿ" ಎಂಬ ಒಂದು ಕಾದಂಬರಿಯು ಹೊರತು ಯಾವ ಕಾದಂಬರಿಯನ್ನೂ ಅಕ್ಷರಶಃ ಭಾಷಾಂತರ ಮಾಡಿರುವದಿಲ್ಲ. ಬೇಕಾದವರ ಕಾದಂಬರಿಯಿರಲಿ, ನಾನು ಹಾಗು ನನ್ನ ಕನ್ನಡಿಗರು,ಎಂಬ ಜೋಡನ್ನು ಮರೆಯದೆ ನಾನು ಕಾದಂಬರಿಯನ್ನು ಬೇಕಾದಲ್ಲಿ ಹಿಗ್ಗಿಸಿರುವೆನು, ಬೇಡಾದಲ್ಲಿ ಕುಗ್ಗಿಸಿರುವೆನು. ಬೇಕಾದಲ್ಲಿ ಹೊಸವಿಷಯವನ್ನು ಸೇರಿಸಿರುವೆನು, ಬೇಡಾದಲ್ಲಿ ಇದ್ದ ವಿಷಯವನ್ನು ತೆಗೆದುಹಾಕಿರುವೆನು. ಆ ಕಾದಂಬರಿಯೇ ನನ್ನ ಕೈಗೊಂಬೆಯಲ್ಲದೆ, ನಾನು ಕಾದಂಬರಿಯ ಕೈಗೊಂಬೆಯಾಗಿರುವದಿಲ್ಲ. ಇದರಿಂದಲೇ ನಾನು ಬರೆದಿರುವ ಕಾದಂಬರಿಗಳ ವಿಷಯವಾಗಿ ನನ್ನ ಮಮತ್ವವೂ, ನಮ್ಮ ಗಳಗನಾಥನು ಬರೆದ ಕಾದಂಬರಿಗಳೆಂಬ ಕಾರಣದಿಂದ ನಮ್ಮ ವಾಚಕ ಮಮತ್ವವೂ ಉಂಟಾಗಿ, ನಾನೂ ನನ್ನ ವಾಚಕರೂ ನನ್ನ ಕಾದಂಬರಿಗಳ ವಿಷಯದ ಮಮಕಾರದ ಸಂಬಂಧದಿಂದ ಏಕೀಭವಿಸಿ ಹೋಗಿರುವೆವು! ಕಾದಂಬರಿಬರೆಯುವಾಗ ವಾಚಕರ ಸ್ವರೂಪದ ಗಳಗನಾಥನೂ, ಕಾದಂಬರಿ ಓದುವಾಗ ಗಳಗನಾಥನ ಸ್ವರೂಪದ ವಾಚಕರೂ ಆಗಿ, ನಾವಿಬ್ಬರೂ

ಇನ್ನು ನನ್ನ ಕಾದಂಬರಿಗಳ ಲೋಕಪ್ರಿಯತೆಯ ಎರಡನೆಯ ಕಾರಣ ವೆಂದರೆ, ನಾನು ಭಾಷಾಪ್ರಭುತ್ವವನ್ನೂ, ವಿಷಯಯೋಜಕತೆಯ ಪ್ರಭುತ್ವ ವನ್ನೂ ಕಾಯ್ದುಕೊಂಡು ಕಾಂದಂಬರಿಗಳನ್ನು ಬರೆದದ್ದು. ಯಾವಪ್ರಾಂತದ ಭಾಷೆಯ ಅಧಿಕಾರಕ್ಕೂ ನಾನು ಒಳಗಾದವನಲ್ಲ. ನಾನು ನನ್ನ ಯೋಗ್ಯತೆಯಂತೆ ಬೇರೆಬೇರೆ ಪ್ರಾಂತಗಳ ಪ್ರಸಿದ್ಧಲೇಖಕರ ಕನ್ನಡ ಗ್ರಂಥಗಳನ್ನು ಓದುವಾಗ ನನ್ನಲ್ಲುಂಟಾದ ಭಾಷೆಗಳ ಪರಿಪಾಕನ ಸ್ವಾಭಾವಿಕವಾದ ಪ್ರಭುತ್ವದಿಂದ ನಾನು ಕಾದಂಬರಿಗಳನ್ನು ಬರೆದಿರುವೆನು. ನಾನು ಭಾಷೆಯ ಏಕೀಕರಣದ ಗೊಡವೆಗೂ ಹೋದವನಲ್ಲ; ಭಾಷೆಯ ಸಂಕರೀಕರಣದ ಗೊಡವೆಗೂ ಹೋದವನಲ್ಲ. ಭಿನ್ನ ಭಿನ್ನ ಭಾಷಾಸರಣಿಗಳ ಸುಪರಿಣಾಮದಿಂದ ನನ್ನ ಹುಟ್ಟುಭಾಷೆಯಲ್ಲಾದ ಸಂಜೀವನೀಕರಣದ ಭಾಷೆಯಿಂದ ನಾನು ಕಾದಂಬರಿಗಳನ್ನು ಬರೆದಿರುತ್ತೇನೆ. ತಿರುಗಿ ಕೇಳಿದರೆ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ನನ್ನ ಭಾಷಾಸರಣಿಯಾಗಲಿ, ನನ್ನ ಭಾಷಾ ಪಾಂಡಿತ್ಯ-ಪ್ರಾವಿಣ್ಯಗಳಾಗಲಿ ಕಾರಣಗಳಲ್ಲವೇ ಅಲ್ಲ. ಕೆಲವು ಪ್ರಾಂತಗಳಲ್ಲಿ ಕೆಲಮಟ್ಟಿಗೆ, ಕೆಲವು ಪ್ರಾಂತಗಳಲ್ಲಿ ಬಹು ಮಟ್ಟಿಗೆ, ಕೆಲವು ಪ್ರಾಂತಗಳ ಸರ್ವಾಂಶದಿಂದ ನನ್ನ ಭಾಷೆಯು ಲೋಕಪ್ರಿಯವಾಗಿದ್ದರೂ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ಆ ಭಾಷಾಮಾನ್ಯತೆಯು ಗೌಣಕಾರಣವೇಸರಿ, ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮುಖ್ಯ ಕಾರಣವೆಂದರೆ, ಸಮಾಜವು ಮೆಚ್ಚುವಂತಹ ಕಾದಂಬರಿಗಳನ್ನೇ ಆರಿಸಿ, ಆಕಾದಂಬರಿಗಳಲ್ಲಿಯ ವಿಷಯಗಳ ಯೋಜನೆಯನ್ನು ವಾಚಕರ ಅನುಭವಕ್ಕೆ ನಡುವಂತೆ ಸಮರ್ಪಕವಾಗಿಯೂ, ಸುಂದರವಾಗಿಯೂ ಅಚ್ಚುಕಟ್ಟಿನಲ್ಲಿ ಮಾಡಿದ್ದು! ಲೇಖಕನು ಆರಿಸಿಕೊಂಡ ವಿಷಯಗಳ ಸೌಷ್ಟವದಲ್ಲಿ ಅವನ ಭಾಷೆಯ ಹುಳುಕುಗಳು ಮುಚ್ಚಿಹೋಗುವವೆಂಬದನ್ನು ನಾನು ಅನುಭವದಿಂದ ಅರಿತಿರುವೆನು.

ಇನ್ನು ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮೂರನೆಯ ಕಾರಣವೆಂದರೆ, ನಾನು ವಾಚಕರಲ್ಲಿ ಏಕೀಭವಿಸಿ ಕಾದಂಬರಿಗಳನ್ನು ಬರೆದದ್ದು. ನಾನು ವಾಚಕರಿಗಿಂತ ಶ್ರೇಷ್ಠನೆಂದಾಗಲಿ, ವಾಚಕರಿಗಿಂತ ಕನಿಷ್ಠನೆಂದಾಗಲಿ ತಿಳಿದು ಕಾದಂಬರಿಗಳನ್ನು ಬರೆದಿರುವದಿಲ್ಲ. ಬರೆಯುವಾಗ ನಾನು

ವಾಚಕರಾಗಿರುವೆನು, ಓದುವಾಗ ವಾಚಕರು ಗಳಗನಾಥರಾಗುವರು. ಇದರಿಂದ ಗಳಗನಾಥನ ಮೆಚ್ಚಿಗೆಯೇ ವಾಚಕರ ಮೆಚ್ಚಿಕೆಯಾಗಿರುವದು. ಗಳಗನಾಥನು ಒಳ್ಳೆಯದೆಂದು ಬರೆದ ಕಾದಂಬರಿಯು ಗಳಗನಾಥನ ವಾಚಕರಿಗೆ ಎಂದೂ ಕೆಟ್ಟದಾಗಿಯೇ ಇಲ್ಲ. ಇಷ್ಟು ಸ್ವಾವಲಂಬನದಿಂದ ನಾನು ಕಾದಂಬರಿಗಳನ್ನು ಬರೆದವನು. ನನ್ನ ಸ್ವಂತದ ಕಾದಂಬರಿಗಳಲ್ಲಂತು ನನ್ನ ಸ್ವಾವಲಂಬನವಿರುವದು ಸ್ವಾಭಾವಿಕವು; ಆದರೆ ಎಂತಹ ಪ್ರಸಿದ್ಧ ಕಾದಂಬರಿಕಾರರ ಕಾದಂಬರಿಗಳಿದ್ದರೂ, ಅವು ನನ್ನಹೃದಯವನ್ನು ಅಲ್ಲಾಡಿಸದಿದ್ದರೆ ಅಂತಹವನ್ನು ನನ್ನ ಕನ್ನಡಿಗರ ಕಣ್ಣುಮುಂದೆ ನಾನು ಇಟ್ಟಿರುವದೇ ಇಲ್ಲ! ಮೊದಲು ನನ್ನ ಸಮಾಧಾನ, ಆಮೇಲೆ ನನ್ನ ವಾಚಕರ ಸಮಾಧಾನ! ನನ್ನ ಕಣ್ಣುಗಳಲ್ಲಿ ನೀರುಗಳನ್ನು ಉದುರಿಸಿದ ಕಾದಂಬರಿಗಳು ನಮ್ಮ ವಾಚಕರ ಕಣ್ಣುಗಳಲ್ಲಿ ನೀರು ಉದುರಿಸದೆ ಬಿಟ್ಟಿರುವದೇ ಇಲ್ಲ. ಇದೇ ಮಾತು ನನ್ನ ಹಾಗು ನನ್ನ ವಾಚಕರ ಎಲ್ಲ ವಿಚಾರ-ವಿಕಾರಗಳಿಗೂ ಹತ್ತುವದು ! ನನ್ನ ಆಯುಷ್ಯದಲ್ಲಿ ನಾನು ಕೈ. ವಾ. ಆಪಟೆಯವರ "ಕಮಲಕುಮಾರಿ" ಎಂಬ ಒಂದು ಕಾದಂಬರಿಯ ಹೊರತು ಯಾವ ಕಾದಂಬರಿಯನ್ನೂ ಅಕ್ಷರಶಃ ಭಾಷಾಂತರ ಮಾಡಿರುವದಿಲ್ಲ. ಬೇಕಾದವರ ಕಾದಂಬರಿಯಿರಲಿ, ನಾನು ಹಾಗು ನನ್ನ ಕನ್ನಡಿಗರು,ಎಂಬ ಜೋಡನ್ನು ಮರೆಯದೆ ನಾನು ಕಾದಂಬರಿಯನ್ನು ಬೇಕಾದಲ್ಲಿ ಹಿಗ್ಗಿಸಿರುವೆನು, ಬೇಡಾದಲ್ಲಿ ಕುಗ್ಗಿಸಿರುವೆನು. ಬೇಕಾದಲ್ಲಿ ಹೊಸವಿಷಯವನ್ನು ಸೇರಿಸಿರುವೆನು, ಬೇಡಾದಲ್ಲಿ ಇದ್ದ ವಿಷಯವನ್ನು ತೆಗೆದುಹಾಕಿರುವೆನು. ಆ ಕಾದಂಬರಿಯೇ ನನ್ನ ಕೈಗೊಂಬೆಯಲ್ಲದೆ, ನಾನು ಕಾದಂಬರಿಯ ಕೈಗೊಂಬೆಯಾಗಿರುವದಿಲ್ಲ. ಇದರಿಂದಲೇ ನಾನು ಬರೆದಿರುವ ಕಾದಂಬರಿಗಳ ವಿಷಯವಾಗಿ ನನ್ನ ಮಮತ್ವವೂ, ನಮ್ಮ ಗಳಗನಾಥನು ಬರೆದ ಕಾದಂಬರಿಗಳೆಂಬ ಕಾರಣದಿಂದ ನಮ್ಮ ವಾಚಕ ಮಮತ್ವವೂ ಉಂಟಾಗಿ, ನಾನೂ ನನ್ನ ವಾಚಕರೂ ನನ್ನ ಕಾದಂಬರಿಗಳ ವಿಷಯದ ಮಮಕಾರದ ಸಂಬಂಧದಿಂದ ಏಕೀಭವಿಸಿ ಹೋಗಿರುವೆವು! ಕಾದಂಬರಿಬರೆಯುವಾಗ ವಾಚಕರ ಸ್ವರೂಪದ ಗಳಗನಾಥನೂ, ಕಾದಂಬರಿ ಓದುವಾಗ ಗಳಗನಾಥನ ಸ್ವರೂಪದ ವಾಚಕರೂ ಆಗಿ, ನಾವಿಬ್ಬರೂ

ಕಾದಂಬರಿಗಳ ಸಾಮ್ರಾಜ್ಯದಲ್ಲಿ ನಲಿದಾಡಿರುವೆವು! ಗಳಗನಾಥನ ಲೇಖನ ವೆಂದರೆ ವಾಚಕರು ಓದದೆ ಬಿಡಲಿಕ್ಕಿಲ್ಲ, ಕನ್ನಡಿಗರ ವಾಚನಾಭಿರುಚಿಯೆಂ ದರೆ ಗಳಗನಾಥನು ಬರೆಯದೆ ಬಿಡಲಿಕ್ಕಿಲ್ಲ. ಹೀಗೆ ನಾನೂ, ನನ್ನ ವಾಚ ಕರೂ ಒಂದುಗೂಡಿದ್ದರಿಂದ ಪರಸ್ಪರರ ವಿಷಯದ ಪ್ರೇಮಾದರಗಳು ಪರಸ್ಪ ರರಲ್ಲಿ ಉತ್ಪನ್ನವಾಗಿರುವವು. ಈ ಸ್ಥಿತಿಯೇ ಲೇಖನ ಕಲೆಯ ವೈಭವವು; ಈ ಸ್ಥಿತಿಯೇ ಮನೋಭೂಮಿಯನ್ನು ಬಿತ್ತಿ ಬೆಳೆಯುವ ಮರ್ಮವು! ಇಂತಹ ವೈಭವ-ಮರ್ಮಗಳು ಕೈಸೇರಲಿಕ್ಕೆ ಪಾಂಡಿತ್ಯಕ್ಕಿಂತ ತಪಸ್ಸು, ತಪಸ್ಸಿಗಿಂತ ದೈವೀ ಪ್ರಸನ್ನತೆಯು ಕಾರಣವಾದ ಸದ್ಗುರು ಪ್ರಭಾವದ ಲ್ಲುಂಟಾದ ತನ್ನಲ್ಲಿಯ ತನ್ನ ಮರವೂ ಕಾರಣವೆಂದು ನನ್ನ ಭಾವನೆಯಂತು ಆಗಿರುವದು! "ಇದನ್ನು ನಾನು ಬರೆದಿಲ್ಲ, ದೇವರು ಬರೆಸಿರುವನು" ಎಂಬ ಕನಕದಾಸಾದಿ ಭಕ್ತಾಗ್ರೇಸರರ ಮಾತು, ಇಲ್ಲಿ ನನಗೆ ನೆನಪಾಗುವದು!

ಹೀಗೆ ನಾನು ಭಾಷೆಯ ಸಂಜೀವನವನ್ನು ಮಾಡಿಕೊಂಡು, ಭಾಷೆಯ ಹಾಗು ವಿಷಯದ ಪ್ರಭುವಾಗಿ, ಸ್ವಾವಲಂಬನದಿಂದ ಕನ್ನಡಿಗರಲ್ಲಿ ಶ್ರದ್ಧೆ ಯನ್ನಿಟ್ಟು ಪ್ರಸಿದ್ಧಪುರುಷರ ಕಾದಂಬರಿಗಳನ್ನು ಬರೆದಿರುವೆನು. ಇದರಿಂದ ನನಗೂ ನನ್ನ ಪ್ರಿಯ ವಾಚಕ ವರ್ಗಕ್ಕೂ ಆರಾಧ್ಯ-ಆರಾಧಕ ಭಾವವುಂಟಾ ದಂತಾಗಿರುತ್ತದೆ. ನಮ್ಮ ಈ ಪವಿತ್ರಭಾವಗಳಿಗೆ ಶ್ರೀರಾಮ-ಶಬರಿಯರ ಭಾವ ವನ್ನು ಹೋಲಿಸಬಹುದು! ನಾನು ಶಬರಿಯು, ವಾಚಕರು ಶ್ರೀರಾಮರು; ನನ್ನ ಕಣ್ಣಿಗೆ ಬಿದ್ದ, ಅಥವಾ ನನ್ನ ಊರ್ಮಿಯಲ್ಲಿ ಸ್ಫುರಿಸಿದ ಕಾದಂಬರಿಗಳೇ ಶ್ರೀರಾಮರೂಪ ವಾಚಕವರ್ಗವೆಂಬ ನನ್ನ ಅಧಿದೈವತಕ್ಕೆ ಭಕ್ತಿಯಿಂದ ಅರ್ಪಿಸತಕ್ಕ ನನ್ನ ಬೋರೆಯ ಹಣ್ಣುಗಳು. ಪುಣ್ಯವಂತ ಶಬರಿಯು, ಇವು ಸೀಯೋ ಹುಳಿಯೋ ಎಂದು ನೋಡುವಾಗ ಸೇವ್ಯಭಕ್ತಿಯ ಅತಿರೇ ಕದಲ್ಲಿ ಇವು ಎಂಜಲಾದಾವೆಂಬ ಎಚ್ಚರಿಲ್ಲದೆ ಹಣ್ಣುಗಳನ್ನು ಕಡಿಕಡಿದು ನೋಡಿ ಹುಳಿಯಾದವನ್ನು ಚಲ್ಲಿ ಕೊಟ್ಟು ಸೀಯಾದವನ್ನು ಶ್ರೀರಾಮರಿಗಾಗಿ ಇಟ್ಟುಕೊಂಡಳು. ಅಂತಹ ಕಡಿದು ನೋಡಿದ ಹಣ್ಣುಗಳನ್ನು ಭಕ್ತವಾತ್ಸ ಲ್ಯದ ಭರದಲ್ಲಿ ಎಂಜಲವೆಂಬ ಮಾತು ಮರೆತುಹೋಗಲು, ಶ್ರೀರಾಮರು ಅವನ್ನು ಭಕ್ಷಿಸಿದರು! ಆ ಸೇವ್ಯ-ಸೇವಕರಲ್ಲಿ ಪರಕೀಯ ಭಾವವಿದ್ದ

ರಷ್ಟೇ ಎಂಜಲವಾಗುವದು ! ಹೊಟ್ಟೆಯ ಹಸುಮಕ್ಕಳು ಉಂಡು ಉಳಿವದ್ದು ತಾಯಿಗೆಲ್ಲಿಯಾದರೂ ಎಂಜಲವೆ? ಭಕ್ತರಿಗೂ ದೇವರಿಗೂ ಇದೇಮಾತು ! ಇನ್ನು ಶಬರಿಯ ಭಕ್ತಿಯು ನನ್ನಲ್ಲಿಲ್ಲವೆಂದು ನಾನು ಒಪ್ಪಿಕೊಳ್ಳುವೆನು. ಆದರೆ ಶ್ರೀರಾಮರ ಸೇವಕ ವಾತ್ಸಲ್ಯಕ್ಕಿಂತ ಹೆಚ್ಚಿನ ವಾತ್ಸಲ್ಯವು ನನ್ನ ವಿಷಯವಾಗಿ ನಮ್ಮ ಕನ್ನಡಿಗರಲ್ಲಿ ನಿಶ್ಚಯವಾಗಿ ಇರುತ್ತದೆ. ಯಾಕಂದರೆ ಬೇಗನೆ ಕಾದಂಬರಿ ಬರೆಯಬೇಕೆಂಬ ಅವಸರದಲ್ಲಿ ಒಂದೆರಡುಸಾರೆ ಅಪಕ್ವ ರಸದ ಕಾದಂಬರಿಗಳನ್ನೇ ನಾನು ಕೊಡಲು, ಅವನ್ನೇ ಸವಿಯಾದ ಕಾದಂಬರಿಗಳನ್ನಂತೆ ನಮ್ಮ ವಾಚಕರು ಪ್ರೀತಿಯಿಂದ ಓದಿದರು !

ಮಹನೀಯರೇ, ಕಾದಂಬರಿಗಳೆಂದರೆ ಕಡಿಮೆ ಯೋಗ್ಯತೆಯ ಗ್ರಂಥಗಳು, ಕಾದಂಬರಿಕಾರನೆಂದರೆ ಕಡಿಮೆ ಯೋಗ್ಯತೆಯ ಗ್ರಂಥಕಾರನು ಎಂಬ ತಿಳುವಳಿಕೆಯಿಂದ ನಾನು ಕಾದಂಬರಿಗಳನ್ನು ಬರೆದಿರುವದಿಲ್ಲ. ತಾತ್ವಿಕವಿಷಯಗಳೆಂಬ ಸಣ್ಣ ಕಹಿ ಗುಳಿಗೆಗಳನ್ನು ನವರಸಗಳ ಕಷಾಯದಲ್ಲಿ ಕೂಡಿಸಿ ಸರ್ವಗ್ರಾಹ್ಯವಾಗುವಂತೆ ಪೌಷ್ಟಿಕ ರಸಾಯನವಾಗಮಾಡುವ ಘನವಾದ ಯೋಗ್ಯತೆಯು ಕಾದಂಬರಿಕಾರರಲ್ಲಲ್ಲದೆ ಮತ್ತೊಬ್ಬ ಲೇಖಕರಲ್ಲಿ ಇರಲಾರದೆಂಬ ಅಹಂಕಾರದಿಂದ ನಾನು ಕಾದಂಬರಿಗಳನ್ನು ಬರೆದಿದ್ದೇನೆ! ಆದ್ದರಿಂದ ನನ್ನ ವಾಚಕವರ್ಗಕ್ಕೆ ಕಾದಂಬರಿಯೊಳಗಿನ ತತ್ವವೂ ಕಾದಂಬರಿಯಾಗಿಯೇ ಪರಿಣಮಿಸಿರುವದು. ಹೀಗೆ ಪರಿಣಾಮವಾಗಬೇಕೆಂಬದನ್ನು ಲಕ್ಷಿಸದೆ ಬರೆದ ಕಾದಂಬರಿಕಾರನು ಗೌರವಶಾಲಿಯಾದ ರಸಿಕ ಕಾದಂಬರಿಕಾರನಲ್ಲವೇ ಅಲ್ಲ. ಕೆಲವು ಕಾದಂಬರಿಕಾರರು ಕೇವಲ ರಸಿಕರಿರಬಹುದು, ಕೆಲವು ಕಾದಂಬರಿಕಾರರು ಕೇವಲ ಗೌರವಶಾಲಿಗಳಿರಬಹುದು. ಕೇವಲ ರಸಿಕರಾದ ಕಾದಂಬರಿಕಾರರು ನನ್ನ "ಪ್ರಬುದ್ಧ ಪದ್ಮನಯನೆ" ಯಂತಹ ರಸಪ್ರಧಾನವಾದ ಸಾಮಾನ್ಯ ಜನಸೇವಿತ ಕಾದಂಬರಿಗಳನ್ನು ಬರೆಯಬಹುದು; ಕೇವಲ ಗೌರವಶಾಲಿಗಳಾದ ಕಾದಂಬರಿಕಾರರು ನನ್ನ "ಮಾಧವ ಕರುಣಾವಿಲಾಸ" ದಂತಹ ತತ್ವಪ್ರಧಾನವಾದ ತಾತ್ವಿಕ ಜನಸೇವಿತ ಕಾದಂಬರಿಗಳನ್ನು ಬರೆಯಬಹುದು ; ಆದರೆ ಗೌರವಶಾಲಿಯಾದ ರಸಿಕ ಕಾದಂಬರಿಕಾರನಾಗಿಯೇ ಕಾದಂಬರಿಗಳನ್ನು

ಬರೆಯುವದು ಶ್ರೇಯಸ್ಕರವೆಂದು ಭಾವಿಸಿ, ಸಾಧಿಸಿದ ಮಟ್ಟಿಗೆ ನಾನು ಕಾದಂಬರಿಗಳನ್ನು ಬರೆದಿರುತ್ತೇನೆ.

ನಾನು ಬರೆದಿರುವ ಕಾದಂಬರಿಗಳಲ್ಲಿ ಕನ್ನಡಿಗರವು, ಮರಾಟರವು, ರಜಪೂತರವು ಎಂಬ ಮೂರು ಬಗೆಯ ಕಾದಂಬರಿಗಳಿರುವವು. ಕನ್ನಡಿಗರವು ನಾಲ್ಕು, ಮರಾಟರವು ಏಳು, ರಜಪೂತರವು ಒಂಭತ್ತು, ಕಲ್ಪಿತವಾದದ್ದು ಒಂದು ಹೀಗೆ ಒಟ್ಟು ಇಪ್ಪತ್ತೊಂದು ಕಾದಂಬರಿಗಳನ್ನು ಕೂಡಿ ಕ್ರೌನ ಅಷ್ಟಪತ್ರದ ೫೦೦೦ ಪುಟದ ಕಾದಂಬರೀ ವಿಷಯವನ್ನು ನಾನು ಬರೆದಿದ್ದೇನೆ. ಇವುಗಳಲ್ಲಿ ಯಾವ ಕಾದಂಬರಿಗಳು ಶ್ರೇಷ್ಠವೆಂದು ಯಾರಾದರೂ ಕನ್ನಡಿಗರು ಕೇಳಿದರೆ, ನಮ್ಮವರವೆಂಬ ದೃಷ್ಟಿಯಿಂದ ಕನ್ನಡಿಗರ ಕಾದಂಬರಿಗಳು, ನಮ್ಮ ನೆರೆಯವರವೆಂಬ ದೃಷ್ಟಿಯಿಂದ ಮರಾಟರ ಕಾದಂಬರಿಗಳು, ಕ್ಷಾತ್ರತೇಜದ ಉಗಮಸ್ಥಾನದವೆಂಬ ದೃಷ್ಟಿಯಿಂದ ರಜಪೂತರ ಕಾದಂಬರಿಗಳು ಶ್ರೇಷ್ಠವೆಂದು ಮಾತ್ರ ನಾನು ಹೇಳಬಹುದಲ್ಲದೆ, ಅವರವರ ಅಭಿರುಚಿಯಂತೆ ಅವರವರ ಮನೋವೃತ್ತಿಗಳನ್ನು ತನ್ಮಯ,ತದ್ರೂಪ, ತದಾಕಾರವಾಗಿ ಮಾಡುವಲ್ಲಿ ಎಲ್ಲ ಕಾದಂಬರಿಗಳೂ ಬಹುತರ ಸಮಾನ ಯೋಗ್ಯತೆಯವೇ ಎಂದು ನಾನು ಹೇಳದೆ ಇರಲಾರೆನು. ಬಾಳೆಯಹಣ್ಣು, ಮಾವಿನಹಣ್ಣು, ದ್ರಾಕ್ಷಿಯಹಣ್ಣು, ಕಿತ್ತಳೆಹಣ್ಣು, ಪೇರಲಹಣ್ಣು ಮೊದಲಾದ ರಸಪುಷ್ಟವಾದ ಹಣ್ಣುಗಳಲ್ಲಿ ಯಾವದು ಶ್ರೇಷ್ಠವೆಂದು ಹೇಗೆ ಹೇಳಬೇಕು ? ಅವವುಗಳ ರುಚಿ ಅವವಕ್ಕೆ! ಅವರವರ ಅಭಿರುಚಿಯಂತೆ ಆಯಾ ಹಣ್ಣುಗಳು ಅವರವರಿಗೆ ಶ್ರೇಷ್ಠವಾದವೆಂತಲೇ ಹೇಳಬೇಕಾಗುವದು. ಒಟ್ಟಿಗೆ, ಸರ್ವ ಸಮೀಚೀನ ಫಲಗಳೂ ಸರ್ವರಿಗೂ ಸೇವ್ಯವಾಗಿರುವಂತೆ, ನನ್ನ ಸರ್ವ ಕಾದಂಬರಿಗಳೂ ಎಲ್ಲರೂ ಓದತಕ್ಕವಾಗಿರುವವೆಂಬದು ಅನುಭವದ ಸಂಗತಿಯು! ನಾನೊಂದು ಹೊಸ ಕಾದಂಬರಿಯನ್ನು ಪ್ರಕಟಿಸಲು, ಅದನ್ನು ಓದಿದ ಕೆಲವು ರಸಿಕ ವಾಚಕರು ನನ್ನನ್ನು ಕಂಡಾಗ—"ಈಗ ನೀವು ಪ್ರಕಟಿಸಿದ ಕಾದಂಬರಿಯು ಹಿಂದಿನ ಎಲ್ಲ ಕಾದಂಬರಿಗಳಿಗಿಂತ ಸವಿ" ಎಂದು ಹೇಳುತ್ತಿರುವದನ್ನು ಕೇಳಿ ನಾನು ಕೌತುಕಪಟ್ಟಿರುವೆನು. ಇತ್ತಿತ್ತ ಕಡೆಯ ಒಂದೆರಡು ಕಾದಂಬರಿಗಳ ವಿಷಯ

ವಾಗಿ ಕೆಲ ಕೆಲವರು ಅಲ್ಪಸ್ವಲ್ಪ ಮೂಗು ಮುರಿದುದನ್ನು ನಾನು ಬಲ್ಲೆನು; ಆದರಿಂದ ನನ್ನ ಹಾಗು ನನ್ನ ವಾಚಕರ ಹೃದಯೈಕ್ಯವು ಚೆನ್ನಾಗಿ ತೋರುತ್ತಿರುವದು. ಮಹನೀಯರೇ, ದುಡ್ಡಿಗಾಗಿ ಭರದಿಂದ ಕಾದಂಬರಿಗಳನ್ನು ಬರೆಯತೊಡಗಿದಾಗ ಎಲ್ಲ ಉತ್ತಮ ಕಾದಂಬರಿಗಳನ್ನೇ ಬರೆದೇನೆಂಬ ಪ್ರತಿಜ್ಞೆಯು ನಡೆಯಲಿಕ್ಕಿಲ್ಲವೆಂಬ ಮಾತನ್ನು ನಾನು ಬರೆಯುವ ಕಾರಣವಿಲ್ಲ. ನನ್ನ ಆ ಮೂಗು ಮುರಿಸಿಕೊಂಡ ಕಾದಂಬರಿಗಳು, ನನ್ನ "ಈಶ್ವರೀಸೂತ್ರ" "ಕಮಲಕುಮಾರಿ" "ಕುಮುದಿನಿ" "ಧರ್ಮರಹಸ್ಯ" ಗಳಂಥ ಹದಿನೇಳು ಹದಿನೆಂಟು ಸುರಸ ಕಾದಂಬರಿಗಳ ಸ್ವಾದವನ್ನು ಒಂದರ ಹಿಂದೊಂದರಂತೆ ಸವಿದ ನಾಲಿಗೆಯ ರಸಮತ್ತತೆಯ ದೃಷ್ಟಿಯಿಂದ ಮೂಗು ಮುರಿಸಿಕೊಂಡಿರುವವೆಂಬದನ್ನು ಮಾತ್ರ ಮರೆಯಬಾರದು ! ಒಟ್ಟಿಗೆ, ಹಡೆದವರಿಗೆ ಹಂದಿಯೂ ಮುದ್ದಾಗಿ ತೋರುತ್ತಿರಲು, ಬಹುಜನರ ಪ್ರೇಮಕ್ಕೆ ಪಾತ್ರವಾಗಿರುವ ಕಾದಂಬರಿಗಳನ್ನು, ಜನರು ಮತ್ತೂ ಅವನ್ನು ಸೇವಿಸಿ ಕಾದಂಬರೀ ನಾಯಕರ ಉದಾತ್ತವೃತ್ತಿಯ ಲಾಭಮಾಡಿಕೊಳ್ಳಲೆಂಬ ಉದ್ದೇಶದಿಂದ ಇಷ್ಟು ಸವಿಮಾಡಿ ವರ್ಣಿಸಿದ್ದಕ್ಕಾಗಿ ನಾನು ಮಹನೀಯರಲ್ಲಿ ಕ್ಷಮೆಯನ್ನು ಯಾಚಿಸುವೆನು !

ಸಾಧಾರಣವಾಗಿ ಭರತಭೂಮಿಯೇ ಈಗ ಶ್ವವೃತ್ತಿಯಲ್ಲಿರುತ್ತಿರಲು, ತದಂತರ್ಗತ ಕರ್ನಾಟಕವು ಆ ವೃತ್ತಿಗೆ ಹೊರಗಾಗಿರುವದೆಂದು ಹೇಗೆ ಹೇಳಬೇಕು ? ಯಾವುದೊಂದು ರಾಷ್ಟ್ರಕ್ಕಾಗಲಿ, ಯಾವುದೊಂದು ಜನಾಂಗಕ್ಕಾಗಲಿ ಬ್ರಾಹ್ಮವೃತ್ತಿ, ಕ್ಷಾತ್ರವೃತ್ತಿ, ವೈಶ್ಯವೃತ್ತಿ, ಶೂದ್ರವೃತ್ತಿ, ಶ್ವವೃತ್ತಿ ಎಂಬ ನಾಲ್ಕು ವೃತ್ತಿಗಳು ಚಕ್ರನೇಮಿಕ್ರಮದಿಂದ ಅಂಟಿಕೊಳ್ಳತಕ್ಕವೆ ! ಯಾಕಂದರೆ ಈ ವೃತ್ತಿಪರಿವರ್ತನವು ಸೃಷ್ಟಿಯ ಸಾಂಸಿದ್ಧಿಕ ಧರ್ಮವಾಗಿರುವದು. ಶ್ವವೃತ್ತಿಯ ಮುಂದಿನ ಮೆಟ್ಟಿಲವೇ ನಾಶಕಾರಕವಾದ ಗ್ಲಾನಿಯು ! ಅಂತಹ ಗ್ಲಾನಿಯ ಪ್ರಸಂಗ ಒದಗಿದಾಗೆಲ್ಲ ಕಲ್ಪಾಂತದವರೆಗೆ ಭಗವತಾರವಾಗಿ ಗ್ಲಾನಿಯು ದೂರವಾಗುತ್ತಿರುವದೆಂದು ನಮ್ಮ ವೈದಿಕ ಮತದ ಸಿದ್ಧಾಂತವು ! ಒಟ್ಟಿಗೆ, ಗ್ಲಾನಿಯ ಕಾಲದಲ್ಲಿ ಪ್ರಬಲ ವಿಭೂತಿಯ ಸಹವಾಸದಿಂದ ಯಾವದೊಂದು ರಾಷ್ಟ್ರವಾಗಲಿ, ಜನಾಂಗ

ವಾಗಲಿ, ವ್ಯಕ್ತಿಯಾಗಲಿ ತನ್ನ ಗ್ಲಾನಿಯನ್ನು ಕಳೆದುಕೊಂಡು ತನ್ನ ಅಧಿಕಾರವಂತೆ ಉಚ್ಚವೃತ್ತಿಯನ್ನು ತಳೆದು ವ್ಯವಸ್ಥಿತವಾಗುತ್ತಿರುವದು. ಬ್ರಾಹ್ಮ, ಕ್ಷಾತ್ರ, ವೈಶ್ಯ, ಶೂದ್ರ ಎಂಬೀ ನಾಲ್ಕು ವೃತ್ತಿಗಳು ವ್ಯವಸ್ಥಿತವಾದವುಗಳೆಂತಲೂ, ಅವುಗಳ ಬೆರಿಕೆಯು ತಕ್ಕ ಪ್ರಮಾಣದಿಂದ ರಾಷ್ಟ್ರದಲ್ಲಿ ಆಗಿರುವಾಗ ಅವೆಲ್ಲ ವೃತ್ತಿಗಳು ರಾಷ್ಟ್ರಪೋಷಕಗಳೆಂತಲೂ, ಹಾಗಿರದಾಗ ರಾಷ್ಟ್ರ ಘಾತಕಗಳೆಂತಲೂ ಆರ್ಯರ ಸಿದ್ಧಾಂತವಿರುವದರಿಂದ, ಆ ವೃತ್ತಿಗಳನ್ನು ಸಮಾನ ಯೋಗ್ಯತೆಯ ರಾಷ್ಟ್ರ ಘಟಕಗಳೆಂದು ತಿಳಿದು ಅವನ್ನು ಆ ನಮ್ಮ ಪೂಜ್ಯ ಪೂರ್ವಜರು ನಿಷ್ಕರ್ಷವಾಗಿ ಸ್ಥಿರಪಡಿಸಿರುವರು. ಅಂದಬಳಿಕ ಕರ್ನಾಟಕದಲ್ಲಿ ಈಗ ವಿಪುಲವಾಗಿರುವ ಶ್ವವೃತ್ತಿಯ ನಾಶವಾಗಿ ಯಾವದೊಂದು ವ್ಯವಸ್ಥಿತ ವೃತ್ತಿಯು ಬರಬೇಕಾದರೆ, ಅದರಲ್ಲಿಯೂ ಈಗ ಬೇಕಾಗಿರುವ ಬ್ರಹ್ಮವೃತ್ತಿಯ ಸಂಸ್ಕರಣದ ಕ್ಷಾತ್ರ ವೃತ್ತಿಯು ಬರಬೇಕಾದರೆ ಶ್ರೀ ಸಮರ್ಥರಾಮದಾಸರ ಶಿಷ್ಯನಾದ ಶಿವ ಛತ್ರಪತಿಯ, ಶ್ರೀ ವಿದ್ಯಾರಣ್ಯರ ಶಿಷ್ಯನಾದ ಹುಕ್ಕ ದೊರೆಯ, ಶ್ರೀ ವೈಕುಂಠ ಯೋಗಿ-ಶ್ರೀ ಪ್ರಾಣನಾಥ ಪ್ರಭುಗಳಂತಹ ಸತ್ಪುರುಷರ ಶಿಷ್ಯರಾದ ಹಲವು ರಜಪೂತ ವೀರರ ಕಾದಂಬರಿಗಳನ್ನು ಕನ್ನಡಿಗರು ಓದಲೇ ಬೇಕಾಗುವದು, ಹಾಗೆ ಮಾಡದೆ ಶ್ವವೃತ್ತಿಯಲ್ಲಿ ಅಗ್ರೇಸರರಾದವರ, ಅಥವಾ ಉನ್ನತ ವಿಷಯಸುಖ ಮಗ್ನರಾದವರ ನಾಯಕತ್ವದ ಕಾದಂಬರಿಗಳನ್ನು ಓದಿದರೆ, ರಾಷ್ಟ್ರದ ವ್ಯಕ್ತಿಗಳಲ್ಲಿ ವ್ಯವಸ್ಥಿತ ವೃತ್ತಿಗಳ ಪೋಷಣವು ಸರ್ವಥಾ ಆಗಲಾರದು; ಯಾಕಂದರೆ, ಉಂಡದ್ದೇ ತೇಗಿನಲ್ಲಿ ಬರುವದು ವಾಡಿಕೆಯು ನಿಯಮವಾಗಿರುವದು. ಆದ್ದರಿಂದ ತಮ್ಮ ರಾಷ್ಟ್ರದ, ಅಥವಾ ಜನಾಂಗದ, ಇಲ್ಲವೆ ವ್ಯಕ್ತಿಯ ಕಲ್ಯಾಣವಾಗಬೇಕೆಂದು ಬಯಸುವವರು, ಆಬಾಲವೃದ್ಧರಿಗೆ, ವಿಶೇಷವಾಗಿ ವಿದ್ಯಾರ್ಥಿ ದಶೆಯಲ್ಲಿರುವವರಿಗೆ ಇಂತಹ ತೇಜಸ್ವಿತೆಯ ಕಾದಂಬರಿಗಳ ವಾಚನದ ಯೋಗವು ಒದಗಿಬರುವಂತೆ ಬುದ್ಧಿಪೂರ್ವಕ ವ್ಯವಸ್ಥೆ ಮಾಡತಕ್ಕದ್ದು. ಇಂತಹ ಮನಃಸಂಸ್ಕರಣದ, ಹಾಗು ಮನ ಉಜ್ಜೀವನೀಕರಣದ ಕಾದಂಬರಿಗಳನ್ನು ಓದುವದರಿಂದ ಮನುಷ್ಯನ ಮನೋಭೂಮಿಯಲ್ಲಿ ಸ್ವಾಭಿಮಾನದ ಅಂಕುರವು ಉತ್ಪನ್ನ

ವಾಗುವದು ; ಆದರೆ ಅದರೊಡನೆ ನಾಸ್ತಿಕ ಭಾವದ, ಗುರುಹಿರಿಯರ ಅವ ಹೇಲನದ, ಧರ್ಮಹೀನತೆ-ಸ್ವಚ್ಛಂದ ವೃತ್ತಿಗಳ ಕೆಟ್ಟ ಕಸಗಳು ಮಾತ್ರ ಮೊಳೆಯಲಾರವು! ಇಂತಹ ಕಾದಂಬರಿಗಳನ್ನು ಓದುವವರ ಮನಸ್ಸಿನಲ್ಲಿ ದುಷ್ಟ ಶಾಸನದ ತ್ವೇಷವು ಉತ್ಪನ್ನವಾಗುವದು ; ಆದರೆ ಆ ತ್ವೇಷವು ಗರ್ವದ ಸಂಪರ್ಕದಿಂದ ಒರಟೆಯೂ, ಸ್ವಾರ್ಥದ ವಿಷದಿಂದ ಕ್ರೂರವೂ ಮಾತ್ರ ಆಗಲಾರದು! ಇಂತಹ ಕಾದಂಬರಿಗಳನ್ನು ಓದುವದರಿಂದ ಮನು ಷ್ಯನು ದೃಢನಿಶ್ಚಯದವನಾಗುವನು ; ಆದರೆ ಅವನ ಸ್ವಭಾವವು ಕಠೋ ರವೂ, ವಿಕ್ಷಿಪ್ತವೂ ಮಾತ್ರ ಆಗಲಾರದು! ಇಂತಹ ಕಾದಂಬರಿಗಳನ್ನು ಓದುವದರಿಂದ ಮನುಷ್ಯನು ತೇಜಸ್ವಿಯಾಗುವನು ; ಆದರೆ ಅವನ ಹೃದ ಯವು ಉಗ್ರವೂ, ನಡತೆಯು ತಾಪದಾಯಕವೂ ಆಗಲಾರದು! ಒಟ್ಟಿಗೆ ಇಂತಹ ಕಾದಂಬರಿಗಳನ್ನು ಓದುವವರು ಧರ್ಮಶ್ರದ್ಧೆಯುಳ್ಳವರೂ, ರಾಜನಿಷ್ಠರೂ, ಗುರುಹಿರಿಯರನ್ನು ಮನ್ನಿಸುವವರೂ, ಪರೋಪಕಾರದ ಬುದ್ಧಿಯುಳ್ಳವರೂ, ತೇಜಸ್ವಿಗಳೂ, ದುಷ್ಟ ಶಾಸನ ಧುರೀಣರೂ ಕಾದಂಬರಿ ಓದುತ್ತಿರುವಾಗಿನ ಮಟ್ಟಿಗಾದರೂ ನಿಶ್ಚಯವಾಗಿ ಆಗಿರುವ ರೆಂದು ಅನುಭವದಿಂದ ಹೇಳಬಹುದು!

ಒಟ್ಟಿಗೆ, ಗಳಗನಾಥನು ಇಂತಹ ಕಾದಂಬರಿಗಳನ್ನಲ್ಲದೆ ಹಿಂದೆ ಹೇಳಿರುವಂತೆ "ಭಾಗವತಾಮೃತ" "ಶೈವಸುಧಾರ್ಣವ" "ತುಲಸೀ ರಾಮಾಯಣಾಮೃತ" ಎಂಬ ಪೌರಾಣಿಕ ಗ್ರಂಥಗಳನ್ನೂ, ಕೆಲವು ಪ್ರಬಂಧಗಳನ್ನೂ ಕೂಡಿ ಒಟ್ಟಿಗೆ ಕ್ರೌನ ಅಷ್ಟಪತ್ರದ ಸರಾಸರಿ ೮೦೦೦ ಪುಟಗಳ ವಿಷಯವನ್ನು ಬರೆದಿರುವನು. ಅವೆಲ್ಲ ಪುಸ್ತಕಗಳ ಸಂಕ್ಷಿಪ್ತ ವರ್ಣನಗಳನ್ನು ಓದಬೇಕೆಂದು ಇಚ್ಛಿಸುವವರು, ಈ ಪುಸ್ತಕದ ಕೊನೆ ಯಲ್ಲಿ ಕೊಟ್ಟಿರುವ ವಿವರಣದ ಪುಸ್ತಕಗಳ ಪಟ್ಟಿಯನ್ನು ನೋಡಬಹುದು.



# ೬ ಗಳಗನಾಥನ ಆಶೆ.

ಈ ಬಗೆಯ ಭಾಷಾ ಸೇವೆಯನ್ನು ಮಾಡಿದ ನಾನು ಹಿಂದೆ ಹೇಳಿದಂತೆ ಈಗ ಐದು ತಿಂಗಳ ಹಿಂದೆ ಬೆಂಗಳೂರಿಗೆ ಬಂದೆನು. ಬೆಂಗಳೂರ ವಿದ್ವತ್ಸಮಾಗಮದಿಂದ ನನ್ನ ಮನಸ್ಸು ಉತ್ತೇಜಿತವಾಗಲು, ವಿವಿಧ ವಿಷಯಗಳನ್ನು ಬರೆಯುವ ಸ್ಫೂರ್ತಿಯು ನನ್ನಲ್ಲಿ ಉಂಟಾಯಿತು; ಅಲ್ಲದೆ ನಾನು ಈಮೊದಲೆ ಬರೆಯಲು ಆರಂಭಿಸಿದ್ದ "ಪ್ರಬಂಧ ಶಿಕ್ಷಣ" ದಂತಹ ಗೌರವದ ವಿಷಯಗಳನ್ನು ಬರೆದು ಮುಗಿಸುವ ಆತುರತೆಯೂ ನನ್ನಲ್ಲಿ ಹೆಚ್ಚಿತು. ಯಾವ ವಿಷಯಗಳನ್ನು ಮೊದಲು ಬರೆಯಬೇಕು, ಯಾವ ವಿಷಯುಗಳನ್ನು ಹಿಂದುಗಡೆ ಬರೆಯಬೇಕು ಎಂಬ ವಿಚಾರದಲ್ಲಿ ಮನಸ್ಸು ಚಂಚಲವಾಯಿತು. ನಾನು ಯಾವ ವಿಷಯಗಳನ್ನು ಯಾವಾಗೇ ಬರೆಯಲಿ, ನನ್ನಲ್ಲಿ ಆ ಅಮೂರ್ತ ಸ್ಫೂರ್ತಿಗಳು ಹುಟ್ಟಿ ಬೆಳೆದು ಫಲಕಾರಿಯಾಗಲಿಕ್ಕೆ ವಿದ್ವತ್ತೆಂಬ ಸಹಜ ಸಾರದಿಂದ ಕೂಡಿದ ಬೆಂಗಳೂರ ನಗರವೇ ತಕ್ಕ ಭೂಮಿಯೆಂದು ನನ್ನ ಭಾವನೆಯಾಗಿರುವದು! ಆ ಪವಿತ್ರ ಭೂಮಿಯಲ್ಲಿಯ ವಿದ್ವಾಂಸರ ಸಹಾನುಭೂತಿಯೇ ತಕ್ಕ ಗೆಯ್ಮೆವು; ಆ ಗೆಯ್ಮೆದ ಯೋಗದಿಂದ ಸೈಲಾದ ಭೂಮಿಯಲ್ಲಿ ಬೆರೆತು ಭೂಮಿಯ ಸತ್ವವನ್ನು ಹೆಚ್ಚಿಸಲಿಕ್ಕೆ ಮಹಾಜನದ ಸಂಸ್ಮರಣ-ಸಾನ್ನಿಧ್ಯಗಳೇ ತಕ್ಕ ಗೊಬ್ಬರಗಳು; ಭೂಮಿಯ ಈ ಸತ್ವಸಾರವನ್ನು ಸಫಲಗೊಳಿಸುವ ವಿಷಯದಲ್ಲಿ ಮಹಾಜನರ ಗುಣಗ್ರಾಹಕತೆಯೇ ತಕ್ಕ ಆರ್ದ್ರತೆಯು! ಇಂತಹ ಸರ್ವಾನುಕೂಲತೆಗಳು ವಿಪುಲವಾಗಿ ಉಳ್ಳ ಬೆಂಗಳೂರಲ್ಲಿ ಬಿತ್ತಿ ಬೆಳೆಯಕೊಳ್ಳುವ ಸಮೂರ್ತರೂಪ ಬೀಜಗಳು ಆ ದೊಡ್ಡವರ ಕೃಪಾ ವೃಷ್ಟಿಯಿಂದ ಸಫಲವಾಗಲೆಂಬ ಭಕ್ತಿಯಿಂದ ಕೆಲವನ್ನು ಇದರಡಿಯಲ್ಲ ಸಂಕ್ಷೇಪದಿಂದ ಉಪೋದ್ಘಾತರೂಪವಾಗಿ ವರ್ಣಿಸಿರುವೆನು.

# ೧ ಸರಾಜಕತಾ

ಅಥವಾ,

# ಸತ್ತೆಗಳ ಸೌಂದರ್ಯಸಾರ!

## ಉಪೋದ್ಘಾತ

"ರಾಜಾ ರಾಷ್ಟ್ರಾಣಾಂ ವೇಶಃ"

ಋಗ್ವೇದ ೫—೩—೨೬.

ಈಗಿನ ಬೇರೆ ಬೇರೆ ದೇಶಗಳಲ್ಲಿ ರಾಜ್ಯದಾಡಳಿತಗಳ ಬೇರೆ ಬೇರೆ ಸತ್ತೆಗಳು ನಡೆಯುತ್ತಿರುವವು. ಕೆಲವು ಕಡೆಯಲ್ಲಿ ರಾಜಸತ್ತೆಯು ನಡೆಯುತ್ತಿರುವದು, ಕೆಲವು ಕಡೆಯಲ್ಲಿ ಕೇವಲ ಪ್ರಜೆಗಳ ಸತ್ತೆಯು ನಡೆಯುತ್ತಿರುವದು, ಕೆಲವುಕಡೆಯಲ್ಲಿ ರಾಜ-ಪ್ರಜರ ಭಿನ್ನ ಭಿನ್ನ ಪ್ರಕಾರದ ಮಿಶ್ರ ಸತ್ತೆಗಳು ನಡೆಯುತ್ತಿರುವವು; ಆದರೆ ಜನರ ಒಲವು ಈಗ ಸ್ವಯಂ ಸತ್ತೆಯ ಕಡೆಗೆ, ಅಂದರೆ ಲೋಕ ಸತ್ತೆಯ ಕಡೆಗೆ ವಿಶೇಷವಾಗಿ ಆಗುತ್ತಿರುವದು.

ಸತ್ತೆಗಳ ಉತ್ಪತ್ತಿಯ ಕ್ರಮವನ್ನು ತರ್ಕದೃಷ್ಟಿಯಿಂದ ವಿಚಾರಿಸಿ ನೋಡಿದರೆ, ಮೊದಲು ಅರಾಜಕತೆಯಿದ್ದು ಆಮೇಲೆ ಸರಾಜಕತೆಯುಂಟಾಯಿತೆಂದು ಅನುಮಾನವಾಗುವದು. ಈ ಸಂಬಂಧದಿಂದ ನಮ್ಮ ಪರಮ ಪೂಜ್ಯಗ್ರಂಥವಾದ ಶ್ರುತಿಯು ಏನು ಹೇಳುತ್ತದೆಂಬದನ್ನು ಕುರಿತು ನೋಡುವ. ಇಲ್ಲಿ ಸ್ಥಳ ಸಂಕೋಚಕ್ಕಾಗಿ ವೇದವಾಕ್ಯಗಳನ್ನು ಉದಹರಿಸಿ ವಿವರವಾಗಿ ಬರೆಯದೆ, ಅವುಗಳ ತಾತ್ಪರ್ಯವನ್ನು ಸ್ವಲ್ಪದರಲ್ಲಿ ಬರೆದು ದಿಗ್ದರ್ಶನ ಮಾತ್ರ ಮಾಡುವೆನು; ಯಾಕಂದರೆ, ಅದರ ಸವಿಸ್ತರ ವರ್ಣನವು "ಸರಾಜಕತಾ" ಎಂಬ ಪುಸ್ತಕದಲ್ಲಿ ಬಂದೇ ಬರುವದು.

ಈ ಸಂಬಂಧದಿಂದ ಶ್ರುತಿಯು ಹೇಳುವದೇನಂದರೆ— "ಪ್ರಾರಂಭದಲ್ಲಿ ದೇಶವು ರಾಜನಿಲ್ಲದೆ, ಅಂದರೆ ನಿರಾಜಕತೆಯಲ್ಲಿ ಇತ್ತು. ಅದನ್ನು ನೋಡಿ ಎಲ್ಲರೂ ಅಂಜಿದರು. ಎಲ್ಲ ಕಡೆಯಲ್ಲಿ ಹೀಗೆಯೇ ಆಗುವದೋ ಏನೋ ಎಂದು ಶಂಕೆಯುಳ್ಳವರಾದರು. ಅದರಿಂದ ಜ್ಞಾನಿಗಳಾದ ಋಷಿಗಳು

ಸರ್ವಜನರ ಕಲ್ಯಾಣವಾಗಬೇಕೆಂದು ಬಯಸಿ, ಪ್ರಥಮತಃ ದೀಕ್ಷಾಬದ್ಧರಾಗಿ ತಪಸ್ಸುಮಾಡಿದರು. ಅದರಿಂದಲೇ ಬಲವೂ, ರಾಷ್ಟ್ರವೂ, ಓಜಸ್ಸೂ ಉತ್ಪನ್ನವಾದವು. ಆದ್ದರಿಂದ ದೈವೀ ಸಂಪತ್ತಿನಿಂದ ಯುಕ್ತರಾದ ಸರ್ವ ವಿದ್ವಾಂಸರೂ ತಪಸ್ಸಿದ್ಧವಾದ ಆ ಸಮಾಜಶಕ್ತಿಗೆ ವಂದನೆಯನ್ನು ಮಾಡಬೇಕು.

ವಿರಾಜಕತೆಯೊಳಗಿನ ಆಸಮಾಜಶಕ್ತಿಯು ಉತ್ಕ್ರಮಣಹೊಂದಿತು. ಆಗ ಅದು ಸಭೆಯಲ್ಲಿ ಪರಿಣತವಾಯಿತು. ಇದನ್ನು ತಿಳಿದವನು ಸಭೆಗೆ ಯೋಗ್ಯನಾಗುತ್ತಾನೆ ಅವನ ಸಭೆಗೆ ಜನರು ಹೋಗುತ್ತಾರೆ.

ಆ ಸಭೆಯಲ್ಲಿ ಪರಿಣತವಾದ ಸಮಾಜಶಕ್ತಿಯು ಉತ್ಕ್ರಮಣಹೊಂದಿ ಅದು ಸಮಿತಿಯಲ್ಲಿ ಪರಿಣತವಾಯಿತು. ಇದನ್ನು ಅರಿತವನು ಸಮಿತಿಗೆ ಯೋಗ್ಯನಾಗುತ್ತಾನೆ. ಅವನ ಸಮಿತಿಗೆ ಜನರು ಹೋಗುತ್ತಾರೆ.

ಆ ಸಮಿತಿಯಲ್ಲಿ ಪರಿಣತವಾದ ಸಮಾಜಶಕ್ತಿಯು ಉತ್ಕ್ರಮಣ ಹೊಂದಿ ಆಮಂತ್ರಣ (ಮಂತ್ರಿಮಂಡಲ)ದಲ್ಲಿ ಪರಿಣತವಾಯಿತು. ಇದನ್ನು ತಿಳಿದವನು ಆಮಂತ್ರಣ (ಗುಪ್ತಾಲೋಚನಾಕಾರ್ಯ) ಕ್ಕೆ ಯೋಗ್ಯನಾಗುತ್ತಾನೆ. ಅವನ ಆಮಂತ್ರಣಕ್ಕೆ ಜನರು ಹೋಗುತ್ತಾರೆ.

ಈ ವರ್ಣನವು ಅಥರ್ವವೇದದಲ್ಲಿರುವದು. ಅರಾಜಕ ಸ್ಥಿತಿಯಲ್ಲಿ ಅರಸನು, ಅರಸನ ಸಭೆಯು ಏನೂ ಇದ್ದಿಲ್ಲ. ಬರಿಯಜನರು ಮಾತ್ರ ಬಿಡಿ ಬಿಡಿಯಾಗಿ ಇದ್ದರು. ಮತ್ತು ನಿಯಾಮಕರಾದೂ ಇಲ್ಲದ್ದರಿಂದ ಎಲ್ಲರೂ ಸ್ವತಂತ್ರರಾಗಿದ್ದರು. ಇಂತಹ ಸ್ಥಿತಿಯು ಒಳ್ಳೆಯದಲ್ಲ. ಇದರಿಂದ ಕಲ್ಯಾಣವೂ ಆಗಲಾರದೆಂದು ತಿಳಿದು, ಋಷಿಗಳು ಸಾಮಾಜಿಕಭಾವನೆಯನ್ನು ಜನರಲ್ಲಿ ಹುಟ್ಟಿಸಿದರು. ಅಂದರೆ ವ್ಯಕ್ತಿಗಳಲ್ಲಿ ವಿಸಂಗತವಾಗಿದ್ದ ಶಕ್ತಿಯನ್ನು ಒಟ್ಟು ಗೂಡಿಸಿದರು. ಹೀಗೆ ಒಟ್ಟುಗೂಡಿದ ವ್ಯಕ್ತಿಗಳ ಶಕ್ತಿಯೇಸಮಾಜವು. ಅದೇ ಸಭೆಯಾಯಿತು. ಆಮೇಲೆ ಸಭೆಯಿಂದ ಸಮಿತಿಯು, ಸಮಿತಿಯಿಂದ ಆಮಂತ್ರಣ ಮಂಡಲವು, ಆಮಂತ್ರಮಂಡಲದಿಂದ ಅರಸನು ಉತ್ಪನ್ನವಾದರು.

ಇದರ ಮೇಲಿಂದ ನೋಡಲು, ಕೇವಲ ಋಷಿಗಳ ಪ್ರಯತ್ನದಿಂದಲೇ ರಾಷ್ಟ್ರದ ಹಾಗು ರಾಜನ್ನ ಉದಯವಾಯಿತೆಂದು ಗೊತ್ತಾಗುವದು. ಈ ವ್ಯವಸ್ಥೆಯಾಗಲು, ರಾಜನಿಲ್ಲದ್ದರಿಂದಾಗುವ ಕಷ್ಟವೂ, ಜನರ ಪ್ರಗತಿ ಯುಂಟಾಗಲಿಕ್ಕೆ ಆಗುವ ತೊಂದರೆಗಳೂ ದೂರವಾಗುತ್ತ, ಜನರ ಕಲ್ಯಾಣಕ್ಕೆ ಮಾರ್ಗವಾಯಿತು. ಈ ಕೆಲಸಕ್ಕಾಗಿ ಋಷಿಗಳು ಮಿತಿಮೀರಿ ಶಾರೀರಿಕ-ಮಾನಸಿಕ ಶ್ರಮವನ್ನು ಮಾಡಿದರು. ಅವರ ಈ ರಾಷ್ಟ್ರ ನಿರ್ಮಾಣ ಕಾರ್ಯವು, ಅಂದರೆ ಹಿಂದೂ ಆರ್ಯರ ಸಂಸ್ಕೃತಿಯದೊಂದು ಭಾಗವು ಇಡಿ ಜಗತ್ತಿನ ತುಂಬ ಹಬ್ಬಿತು. ಇದರಿಂದ ಸುಧಾರಿಸಿದ ಎಲ್ಲ ಜನಾಂಗ ಗಳು ಆರ್ಯ-ಋಷಿಗಳ ಋಣಿಗಳಾಗಿದ್ದಾರೆಂಬದರಲ್ಲಿ ಸಂಶಯವಿಲ್ಲ. ಅರಸ ನಿಲ್ಲದ ಕಷ್ಟದಾಯಕ ಸ್ಥಿತಿಯೊಳಗಿಂದ ಸಮಾಜವನ್ನು ಪಾರಮಾಡಿಕೊಂಡು ಸಮಾಜಾಗ್ರಣಿಗಳ ಸಭಾಕಾಲದ ಸ್ಥಿತಿಯನ್ನುಂಟುಮಾಡಿ, ಬಳಿಕ ರಾಜ ನಿರ್ಮಾಣಕಾರ್ಯವನ್ನು ಕೊನೆಗಾಣಿಸಿ, ಸಭಾಸದರ ಸಹಾಯದಿಂದ ರಾಜನು ರಾಜ್ಯ ಕಾರಭಾರವನ್ನು ಮಾಡುವ ಸ್ಥಿತಿಯವರೆಗೆ ಸಮಾಜವನ್ನು ಎಳೆದು ತರಲಿಕ್ಕೆ ಎಷ್ಟು ಕಾಲವು ಹತ್ತಿದ್ದೀತು? ಅತ್ಯಂತ ಪ್ರಾಚೀನತಮ ವಾದ ವೇದದಲ್ಲಿ ಈಗಿನ ಕಾಲದ ಸುಧಾರಿಸಿದ ರಾಜನೀತಿಯ ಸಂಪೂರ್ಣ ಸ್ವರೂಪವು ಕಂಗೊಳಿಸುವದನ್ನು ನೋಡಿದರೆ, ಜಗತ್ತಿನಲ್ಲಿ ಈವರೆಗೆ ಹಬ್ಬಿ ರುವ ಎಲ್ಲ ರಾಜ್ಯ ವ್ಯವಸ್ಥಾ ಶಾಸ್ತ್ರವು ಆರ್ಯಾವರ್ತದೊಳಗಿಂದಲೇ ಹೊರ ಬಿದ್ದಿರಬಹುದೆಂದು ಅನುಮಾನವಾಗುತ್ತದೆ. ಆರ್ಯಾವರ್ತವು ಎಷ್ಟೋ ವಿಷ ಯಗಳಲ್ಲಿ ಜಗತ್ತಿಗೆ ಗುರುವೆನಿಸಿಕೊಳ್ಳುತ್ತಿರುವಂತೆ, ರಾಜನೀತಿಯ ಸಂಬಂ ಧವಲ್ಲಿಯೂ ಗುರುವಾಗಿರುತ್ತದೆಂದು ತರ್ಕಿಸಲಿಕ್ಕೆ ಆಸ್ಪದವಿರುತ್ತದೆ. ಇದೇ ಅರ್ಥವನ್ನು ಕುರಿತು ಸ್ಮೃತಿಕಾರರು— "ಏತದ್ದೇಶ ಪ್ರಸೂತಸ್ಯ ಸಕಾಶಾದಗ್ರಜನ್ಮನಃ। ಸ್ವಂಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವ ಮಾನವಾಃ" ಎಂದು ಹೇಳಿರುವರು. ಅಂದರೆ "ಪೃಥ್ವಿಯೊಳಗಿನ ಸರ್ವ ಜನರು, ಆರ್ಯಾವರ್ತದಲ್ಲಿ ಹುಟ್ಟಿದ ದ್ವಿಜರ ಕಡೆಯಿಂದ ತಮ್ಮತಮ್ಮ ಕರ್ತವ್ಯಗಳನ್ನು ಕಲಿತುಕೊಳ್ಳತಕ್ಕದ್ದು." ಎಂದು ಸೂಚಿಸಿರುವರು.

ಇದೇ ಮಾತನ್ನು ಪುರಾಣಗಳಲ್ಲಿಯೂ ಕಾಣಬಹುದು. ರಾಜನಿರ್ಮಾಣದ ಸಂಬಂಧದಿಂದ ಶ್ರೀಮದ್ಭಾಗವತದಲ್ಲಿ ಹೇಳಿದ್ದರ ಸಂಕ್ಷಿಪ್ತ ವರ್ಣನವು

ಹೇಗಂದರೆ—ಸೃಷ್ಟಿಕರ್ತನಾದ ಬ್ರಹ್ಮನು ಮಾನಸಿಕ, ದೈಹಿಕ, ಮೈಥುನಿಕ ಎಂಬ ಮೂರು ಬಗೆಯ ಸೃಷ್ಟಿಗಳನ್ನು ಮಾಡಿದನು. ಮೊಟ್ಟಮೊದಲು ಮಾಡಿದ ಮಾನಸಿಕ-ದೈಹಿಕ ಸೃಷ್ಟಿಗಳಿಂದ ಪ್ರಜಾಪತಿಗಳೂ, ಋಷಿಗಳೂ, ದೇವತೆಗಳೂ ಉತ್ಪನ್ನರಾದರು. ಆದರೂ ಸೃಷ್ಟಿಯ ವಿಸ್ತಾರವು ತನ್ನ ಮನಸ್ಸಿನಂತೆ ಆಗಲಿಲ್ಲ; ಸುವ್ಯವಸ್ಥೆಯೂ ಉಂಟಾಗಲಿಲ್ಲ. ಆದರಿಂದ ಬ್ರಹ್ಮನು ಚಿಂತಾಮುಗ್ನನಾಗಿರುವಾಗ ಆತನ ದೇಹವು ಇಬ್ಭಾಗವಾಗಿ ಅದರೊಳಗಿಂದ ಒಂದು ಮಿಥುನವು (ಜೋಡು) ಉತ್ಪನ್ನವಾಯಿತು. ಅದರಲ್ಲಿ ಪುರುಷನು ಸ್ವಾಯಂಭುವ ಮನುವು. ಸ್ತ್ರೀಯು ಆತನ ಪಟ್ಟದ ರಾಣಿಯಾದ ಶತರೂಪೆಯು ! ಮಾನವಕೋಟಿಯ ಮೂಲಪುರುಷರಾದ ಈ ಮನು-ಶತರೂಪೆಯರ ಜೋಡಿಯಿಂದ, ಅಥವಾ ಮಿಥುನದಿಂದ ಮೈಥುನ ಸೃಷ್ಟಿಯು ಉತ್ಪನ್ನವಾಗಿ ಪ್ರಜಾವೃದ್ಧಿಯಾಗಹತ್ತಿತು. ಈ ಮನುವೇ ಆದ್ಯರಾಜನು! ಅಂದಬಳಿಕ ಶ್ರುತಿಯಲ್ಲಿ ಹೇಳಿದಂತೆ ಋಷಿಗಳ ಉತ್ಪತ್ತಿ ಕಾಲದ ಅರಾಜಕ ಸ್ಥಿತಿಯಿಂದ ಮನುಚಕ್ರವರ್ತಿಯ ಕಾಲದ ಸರಾಜಕ ಸ್ಥಿತಿಯು ಉಂಟಾಯಿತೆಂದು ಪುರಾಣಗಳು ಹೇಳಿದ ಹಾಗಾಗಲಿಲ್ಲವೋ. ಇಂತಹ ಮನುಗಳೇ ತಮ್ಮ ಆಲೋಚನಾ ಸಭೆಯವರ ಸಹಾಯದಿಂದ ನಿರ್ಮಾಣಮಾಡಿದ ರಾಜಶಾಸನ ಶಾಸ್ತ್ರವೇ "ಮನುಸ್ಮೃತಿ" ಯೆಂಬ ಹೆಸರನ್ನು ಪಡೆಯಿತು. ಈಗಿನ ವೈವಸ್ವತ ಮನುವಿನ ಸ್ಮೃತಿಯೇ ಆತನ ಮನ್ವಂತರದ ನಮಗೆ ರಾಜನೀತಿ-ಪ್ರಜಾನೀತಿಗಳನ್ನು ತಿಳಿಸುವ ಪೂಜ್ಯ ಗ್ರಂಥವಾಗಿರುತ್ತದೆ. ಈ ಪೂಜ್ಯ ಗ್ರಂಥದಲ್ಲಿಯ ಮಾರ್ಗಕ್ಕೆ ಶರಣುಹೋಗಿಯೇ ನಮ್ಮಲ್ಲಿ ಧರ್ಮಿಷ್ಠ ರಾಜರೂ, ಧರ್ಮಿಷ್ಠ ಪ್ರಜೆಗಳೂ ನಡಕೊಳ್ಳುತ್ತ ಬಂದದ್ದರಿಂದ, ಹಲವು ಶತಮಾನಗಳ ವರೆಗೆ ಕ್ಷತ್ರಿಯ ರಾಜ ವಂಶಗಳು ತಡೆಯುತ್ತ ಬಂದವು.

ರಾಜಶಬ್ದದ ಮೂಲಾರ್ಥವು ರಂಜನಮಾಡುವವನೆಂದು ಇರುತ್ತದೆ. ಇಂತಹ ಧರ್ಮಿಷ್ಠ ರಾಜನು ಪ್ರಜೆಗಳ ತಂದೆಯೂ, ತ್ರಿಮೂರ್ತಿಗಳಲ್ಲಿ ಸೃಷ್ಟಿಯ ಪಾಲನವೇ ಮುಖ್ಯ ಧರ್ಮವಾಗಿರುವ ವಿಷ್ಣುವಿನ ಸ್ವರೂಪವೂ ಆಗಿರುವನೆಂದು ಅತ್ಯಂತ ಧರ್ಮನಿಷ್ಠ ಹಿಂದೂ ಸಾತ್ವಿಕ ಕೃತಜ್ಞ ಆರ್ಯ ವಂಶಜರು ಭಾವಿಸಿದ್ದರಲ್ಲಿ ಆಶ್ಚರ್ಯವೇನು ? ಅಥವಾ ಅದರಲ್ಲಿ

ಅಯಥಾರ್ಥನಾದರೂ ಏನು? ಇಂತಹ ಪ್ರಜಾರಂಜಕರಾಜನ, ಹಾಗು ರಾಜನಿಷ್ಠ ಪ್ರಜೆಗಳ ವೈಭವವನ್ನು ತಿಳಿಯಲು ದೈವೀ ಭಾವದ ಆರ್ಯರ ಹೊರತು ಅನ್ಯರು ಸರ್ವಥಾ ಶಕ್ತರಲ್ಲ. ಪ್ರಜಾ ರಂಜಕ ರಾಜರಲ್ಲಿ ಶ್ರೀರಾಮನು ಶ್ರೇಷ್ಠನಾದದ್ದರಿಂದ, ರಾಮರಾಜ್ಯದ ಉಲ್ಲೇಖವು ಮಾತುಮಾತಿಗೆ ನಮ್ಮಲ್ಲಿ ಈಗಲೂ ಆಗುತ್ತಿರುತ್ತದೆ. ಪ್ರಜಾವಾತ್ಸಲ್ಯವೆಂದರೆ, ಪ್ರಜೆಗಳ ಹಿತಕ್ಕಾಗಿಯೇ ಅಲ್ಲ, ಒಮ್ಮೊಮ್ಮೆ ಪ್ರಜೆಗಳ ರಂಜನಕ್ಕಾಗಿಯೂ ರಾಜನು ಸರ್ವಸ್ವವನ್ನೂ ಪರಿತ್ಯಜಿಸುವದು. ಶ್ರೀರಾಮನು ಒಂದು ವಿಲಕ್ಷಣ ಪ್ರಸಂಗದಲ್ಲಿ ಒಬ್ಬ ಅಗಸನ ಮನೋರಂಜನಕ್ಕಾಗಿ ತನ್ನ ಅರ್ಧಾಂಗಿಯೂ, ಪತಿವ್ರತಾ ಶಿರೋಮಣಿಯೂ ಆದ ಸೀತಾ ಮಾತೆಯನ್ನು, ಆಕೆಯ ಗರ್ಭಭಾರವನ್ನು ಲೆಕ್ಕಿಸದೆ ಅಡವಿಗಟ್ಟಿದ್ದರ ರಹಸ್ಯವು ವಿಚಾರಮಾಡತಕ್ಕದ್ದಾಗಿದೆ. ಶ್ರೀರಾಮನು ತನ್ನ ಪ್ರಜೆಗಳ ಸಲುವಾಗಿಯೂ, ಪ್ರಜೆಗಳು ಶ್ರೀರಾಮನಸಲುವಾಗಿಯೂ ತಮ್ಮನ್ನು ಮರೆತುಬಿಡುತ್ತಿದ್ದದ್ದರಿಂದ, ಅಂದರೆ ಶ್ರೀರಾಮನೇ ಪ್ರಜಾರೂಪನು, ಪ್ರಜೆಗಳೇ ಶ್ರೀರಾಮರೂಪರು ಆಗುತ್ತಿದ್ದದ್ದರಿಂದ ಶ್ರೀರಾಮನ ವ್ಯಕ್ತಿನಿಷ್ಠ ರಾಜಕೀಯ ಸ್ವಾತಂತ್ರ್ಯವೇ ಆತನ ಪ್ರಜೆಗಳ ಲೋಕನಿಷ್ಠ ರಾಜಕೀಯ ಸ್ವಾತಂತ್ರ್ಯವಾಗಿ ಪರಿಣಮಿಸುತ್ತಿತ್ತು. ಪ್ರಜೆಗಳನ್ನು ಉದಾತ್ತವಾದ ಶಿಕ್ಷಣ - ರಕ್ಷಣ - ಪೋಷಣಗಳಿಂದ ಋಣಿಯಾಗಮಾಡುವ ರಾಜನು, ಪ್ರಜೆಗಳಿಗೆ ಪಿತೃಸ್ವರೂಪನಾಗಿರುವದರಿಂದ ಅಂತಹ ಧರ್ಮಿಷ್ಠನಾದ, ಅಂತೇ ವಿಷ್ಣುಸ್ವರೂಪನಾದ ರಾಜನ ದ್ರೋಹವು ನಿಶ್ಚಯವಾಗಿ ದೈವದ್ರೋಹವಾಗಿರುವದು ; ಮತ್ತು ಅಂತಹ ಪ್ರಜಾಹಿತ ತತ್ಪರನಾದ ಧರ್ಮಿಷ್ಠರಾಜನು ಪ್ರಜೆಗಳ ಆತ್ಮವಾಗಿರುವದರಿಂದ, ಅಂಥವನ ದ್ರೋಹವು ಕೇವಲ ರಾಜದ್ರೋಹವೇ ಅಲ್ಲ, ಪ್ರಜಾದ್ರೋಹವೂ, ಆತ್ಮದ್ರೋಹವೂ ಆಗಿರುವದು ; ಆದ್ದರಿಂದಲೇ ಜ್ಞಾನಿಗಳು ಧರ್ಮಿಷ್ಠರಾಜನ ದ್ರೋಹವನ್ನು ಮಹತ್ಪಾಪವೆಂದು ಎಣಿಸಿರುವರು. ಶ್ರೀರಾಮನಂಥ ರಾಜನ ದ್ರೋಹವು ದ್ರೋಹಿಗಾಗಲಿ, ಜಗತ್ತಿಗಾಗಲಿ ಕ್ಷೇಮಕರವಾಗಬಹುದೋ ? ಶ್ರೀರಾಮನಂತಹ ಪ್ರಜಾರಂಜಕ ರಾಜರು ವಿಷ್ಣ್ವಂಶರೇ ಏಕೆ, ಪ್ರತ್ಯಕ್ಷ ವಿಷ್ಣುವೇ ಆಗಿರುವರು. ಇಂಥ ಧರ್ಮಿಷ್ಠ ರಾಜರನ್ನೇ "ನಾವಿಷ್ಣುಃ

ಪೃಥಿವೀ ಪತಿಃ'' ಎಂದು ಸ್ಮೃತಿಯು ಹೇಳುವದು. ಇಂಥ ಧರ್ಮಿಷ್ಠ ರಲ್ಲದ ಪ್ರಜಾಭಕ್ಷಕ ರಾಜರನ್ನು ಸ್ಮೃತಿಯು ವಿಷ್ಣ್ವಂಶವೆಂದು ಹೇಳಿರುವ ದಿಲ್ಲ. ಯಾಕಂದರೆ, ಅಂಥವರು ಪೃಥ್ವಿಯ ಪತಿಗಳೇ ಅಲ್ಲ, ಪೃಥ್ವಿಯ ಅಪಹಾರಕರು!

ನಮ್ಮ ಭರತಭೂಮಿಯಲ್ಲಿ ಶ್ರೀರಾಮನಂತಹ ಪ್ರಜಾರಂಜಕ ರಾಜ ರಾಗಿರುವಂತೆ, ವೇನರಾಜನಂತಹ ಪ್ರಜಾ ಭಂಜಕ ರಾಜರೂ ಆಗಿರುವರು ಅಂದಬಳಿಕ ಪ್ರಜಾ ಭಂಜಕ ರಾಜರಾದ ಕಾಲದಲ್ಲಿ ಆ ರಾಜನ ವಂಶವನ್ನೆ ಕುಗ್ಗಿಸಿ ಲೋಕಸತ್ತೆಯನ್ನು ನಿರ್ಮಿಸದೆ ಈವರೆಗೂ ನಾವು ''ನಾವಿಷ್ಣು ಪೃಥಿವೀ ಪತಿಃ'' ಎಂಬ ಸ್ಮೃತಿ ವಾಕ್ಯದಲ್ಲಿ ವಿಶ್ವಾಸವಿಟ್ಟು ರಾಜನಿಷ್ಠ ರಾಗಿಯೇ ಇರುವೆವಲ್ಲ? ಪಾಶ್ಚಾತ್ಯರ ಸಹವಾಸದಿಂದ ಲೋಕಸತ್ತೆಯ ಆವೇಶವು ಒಂದು ನಿಟ್ಟು ಹಿಡಿದು ನಮ್ಮೊಳಗೆ ಮೆಲ್ಲಮೆಲ್ಲನೆ ಆಗುತ್ತಿದ್ದರೂ ವೇಷಧಾರಿಗಳ ಆವೇಶದಂತೆ ಅದು ಕಾರ್ಯಕಾರಿಯಾಗದೆ ಕೃತ್ರಿಮವಾಗಿ ಪರಿಣಮಿಸುತ್ತಿರುವ ಹಾಗೆ ತೋರುವದಲ್ಲ? ಇದರ ಕಾರಣವೇನಿರಬಹುದು ಅಂತಹ ದುಷ್ಟ ವೇನರಾಜನೆಂದರೇನು, ಶಮಪ್ರಧಾನರಾದ ಋಷಿಗಳು ಅವನನ್ನು ಲೋಕ ಕಲ್ಯಾಣಕ್ಕಾಗಿ ಸಂಹರಿಸಿದರೂ, ವೇನನ ಸೂರ್ಯವಂ ಶವು ಭಗವತ್ಕೃಪೆಗೆ ಪಾತ್ರವಾದ ವಂಶವೆಂದು ತಿಳಿದು ದುಷ್ಟ ವೇನನನ್ನು ಲಕ್ಷಿಸದೆ, ಆತನ ಭಗವದನುಗ್ರಹೀತ ವಂಶವನ್ನು ಲಕ್ಷಿಸಿ ವೇನನ ಬಲಭುಜದ ಮಂಥನದಿಂದಲೇ ಪೃಥುರಾಜನನ್ನು ಹುಟ್ಟಿಸಿ ಸೂರ್ಯವಂಶವನ್ನೇ ಮುಂ ದಕ್ಕೆ ಸಾಗಿಸಿದರು; ಯಾಕಂದರೆ ವ್ಯಕ್ತಿಗಿಂತ ವಂಶವೂ, ವಂಶಕ್ಕಿಂತ ದೈವಾನುಗ್ರಹವೂ ಶ್ರೇಷ್ಠವೆಂದು ಜ್ಞಾನಿಗಳು ತಿಳಿದಿರುವರು. ಮನೆತನ ದಲ್ಲಿ ಒಬ್ಬ ಯಜಮಾನನು ದುಷ್ಟನಾದರೆ, ಮನೆತನದ ಯಾಜಮಾನ್ಯವನ್ನೇ ತೆಗೆದುಹಾಕಿಬಿಡುವದು ಆಧ್ಯಾತ್ಮದೃಷ್ಟಿಯ ಆರ್ಯರ ಶೀಲವೇ ಅಲ್ಲ. ಸೂರ್ಯವಂಶದಲ್ಲಿ ವೇನನಂತಹ ಒಬ್ಬ ದುಷ್ಟರಾಜನ ಉಲ್ಲೇಖವಾಗಿ ದ್ದರೆ, ಪೃಥುರಾಜ, ಶ್ರೀರಾಮರಂತಹ ಹಲವು ಜನ ಪ್ರಜಾವತ್ಸಲ ರಾಜರ ಉಲ್ಲೇಖವೂ ಇರುತ್ತದೆ. ಒಳ್ಳೆಯದರ ಕಡೆಗೆ ಲಕ್ಷವಿಟ್ಟು ಕೆಟ್ಟದನ್ನು ಸಮಾಧಾನದಿಂದ ತಾಳಿಕೊಳ್ಳುವದು, ತಾತ್ಕಾಲಿಕ ಸುಖಕ್ಕೆ ಮಹತ್ವಕೊಡ

ದಿರುವ ಉದಾತ್ತ ಸುಖದೃಷ್ಟಿಯು ವೈದಿಕ ಆರ್ಯರ ಶೀಲವಾಗಿರುವದು! ಈ ಲೋಕದಲ್ಲಿ ಮಿಂಚಿಹೋಗುವ ಸುಖವು, ಅದು ಎಷ್ಟು ದೊಡ್ಡದಾದರೂ ಅಶಾಶ್ವತವೆಂದು ತಿಳಿದು, ಉದಾತ್ತ ಶಾಶ್ವತ ಸುಖ ಹೇತುವಾದ ಧರ್ಮವನ್ನು ಅವರು ತ್ಯಜಿಸತಕ್ಕವರಲ್ಲ. ಅಲ್ಲದೆ ಸೃಷ್ಟಿಯೊಳಗಿನ ಯಾವ ಸಂಗತಿಯೇ ಆಗಲಿ, ಅದು ಒಳಿತು-ಕೆಡಕುಗಳಿಂದ ಕೂಡಿ ಇರುವದಲ್ಲದೆ, ಬರಿಯ ಒಳಿತಾಗಿಯಾಗಲಿ, ಬರಿಯ ಕೆಡಕಾಗಿಯಾಗಲಿ ಇರಲಾರದೆಂಬ ಸತ್ಯಸಿದ್ಧಾಂತವನ್ನು ಕಾರ್ಯತಃ ಅವರು ತಿಳಿದವರು. ಆದ್ದರಿಂದಲೇ ಪ್ರಾಣಾಂತಸಮಯ ಒದಗಿದರೂ ಅವರು ಧರ್ಮವನ್ನು ಪರಿತ್ಯಜಿಸರು; ಆದ್ದರಿಂದಲೇ ಧರ್ಮಿಷ್ಠರಾದ ಋಷಿಗಳು ದುಷ್ಟವೇನನನ್ನು ಲೋಕಕಲ್ಯಾಣಕ್ಕಾಗಿ ಅನಿರ್ವಾಹಪಕ್ಷ ವಧಿಸಿದರೂ, ಈಶ್ವರಾನುಗ್ರಹಕ್ಕೆ ಪಾತ್ರವಾದ ವಂಶದವನೆಂಬ ದೃಷ್ಟಿಯಿಂದ ಅವನನ್ನು ಮನ್ನಿಸದೆ ಬಿಡಲಿಲ್ಲ. ಇದೇ ನಮ್ಮ ವೈದಿಕ ಆರ್ಯರ ಶೀಲವು. ಅಂತೇ ಹದಿನೆಂಟು ಪುರಾಣಗಳನ್ನು ಹುಡುಕಿದರೂ ಈಗಿನ ಕಲಿಯುಗದ ವಿವಿಧ ಸತ್ತೆಗಳ ತಾಕಲಾಟಗಳ ರಭಸವೆಂದುಂಟಾಗುವ ಲೋಕದಾಹಕ ಅಗ್ನಿಯು ಉತ್ಪನ್ನವಾದ ಉದಾಹರಣಗಳು ಎಲ್ಲಿಯೂ ಕಣ್ಣಿಗೆ ಬೀಳಲಿಕ್ಕಿಲ್ಲವೆಂದು ಧೈರ್ಯವಾಗಿ ಹೇಳಬಹುದು; ಯಾಕಂದರೆ ಪ್ರಜೆಗಳ ಈಗಿನಂತಹ ವಿಷಯಸುಖದ ಅತಿರೇಕವೂ, ರಾಜರ ಈಗಿನಂತಹ ಪ್ರಜಾ ಭಕ್ಷಕತನವೂ ಪೌರಾಣಿಕರ ಕಣ್ಣಿಗೆ ಬೀಳಲಿಲ್ಲ; ಬಿದ್ದಿದ್ದರೆ ಈಗಿನವರು ಇನ್ನು ಮೇಲೆ ಬರೆಯಬಹುದಾಗಿರುವ ಹತ್ತೊಂಬತ್ತನೆಯ ಹಕ್ಕು-ಬಾಧ್ಯತೆಗಳ ಹೊಸ ಪುರಾಣವೊಂದನ್ನು ಅವರೇ ಬರೆದುಬಿಡುತ್ತಿದ್ದರು! ಆ ಪುರಾಣದಲ್ಲಿ ಹಕ್ಕು-ಬಾಧ್ಯತೆಗಳಬಡಿದಾಟವೇ ಪ್ರಾಮುಖ್ಯವಾಗಿ ವರ್ಣಿಸಲ್ಪಡುತ್ತಿತ್ತು!

ರಾಜರಲ್ಲಿ ಬರಬರುತ್ತ ಪ್ರಜಾವಾತ್ಸಲ್ಯವು ಕಡಿಮೆಯಾಗಿ ಪ್ರಜಾಭಕ್ಷಕತನವು ಹೆಚ್ಚುಹತ್ತಿದ್ದರಿಂದ ಪ್ರಜೆಗಳ ಲಕ್ಷವು ತಮ್ಮ ಹಕ್ಕು ಬಾಧ್ಯತೆಗಳ ಕಡೆಗೆ ಹೋದದ್ದು ಆಶ್ಚರ್ಯವಲ್ಲ. ಕಲಿಯುಗದಲ್ಲಿ ಇಂತಹ ಪ್ರಜಾಭಕ್ಷಕ ರಾಜರಾಗುವರೆಂದು ನಮ್ಮ ಪುರಾಣಗಳಲ್ಲಿ ಭವಿಷ್ಯ ಹೇಳಿರುವದೂ ಉಂಟು. ಇನ್ನು ಈಗ ಪ್ರಜೆಗಳಾದರೂ ಒಬ್ಬರನ್ನೊಬ್ಬರು ಹಿಂಡುವವರಾಗಿರದೆ ಪರಹಿತತತ್ಪರರಾಗಿದ್ದರೆ, ಲೋಕ ಸತ್ತೆಯು ಕ್ಷೇಮಕರವೆಂದು

ಹೇಳಬಹುದು. ಈಗಿನ ರಾಜರು ತಮ್ಮ ಬಾಹುಬಲದಿಂದ ಪ್ರಜೆಗಳನ್ನು ಹಿಂಡುವವರಾಗಿದ್ದರೆ, ಈಗಿನ ಪ್ರಜೆಗಳಲ್ಲಿಯು ಬೇರೆ ಬೇರೆ ಸಂಗಡದವರು ತಮ್ಮ ಬಹುಮತದ ಬಲದಿಂದ ಅನ್ಯರನ್ನು ಹಿಂಡಲಿಕ್ಕೆ ಬರಬಹುದಾದಷ್ಟರ ಮಟ್ಟಿಗಾದರೂ ಹಿಂಡಬೇಕೆಂದು ಹವಣಿಸಹತ್ತಿದ್ದಾರೆ. ಅಂದಬಳಿಕ ಕಬ್ಬಿಣದ ಗಾಣದಿಂದ ಒತ್ತಿ ಹಿಂಡಿದರೇನು, ಕಟ್ಟಿಗೆಯ ಗಾಣದಿಂದ ಮೆಲ್ಲಗೆ ಹಿಂಡಿದರೇನು? ಹಿಂಡುವ ಹಾಗು ಹಿಂಡಿಸಿಕೊಳ್ಳುವ ತಾಪವು ಜಗತ್ತಿಗೆ ಬಿಟ್ಟಿದ್ದಲ್ಲ. ಧಾರ್ಮಿಕ ವೃತ್ತಿಯ ಆತ್ಮಶುದ್ಧಿಯು ಪ್ರಜೆಗಳಲ್ಲಿಯೂ, ರಾಜರಲ್ಲಿಯೂ ಇಲ್ಲದಾದಾಗ ಯಾವ ಸತ್ತೆಯಿಂದಾದರೂ ಲೋಕದ ತಾಪವು ತಪ್ಪಿದ್ದಲ್ಲ. ಈಗ ಸಾರ್ವತ್ರಿಕವಾಗಿ ಆತ್ಮಶುದ್ಧಿಯು ನಷ್ಟವಾಗುತ್ತಿದ್ದು, ಸ್ವಚ್ಛಂದವೃತ್ತಿಯ ಆತ್ಮಮಾಲಿನ್ಯವು ಜನರಲ್ಲಿ ಹೆಚ್ಚುತ್ತಿರುವದು. ಆದ್ದರಿಂದ ಜನರ ಅಹಂಕಾರವು ಹೆಚ್ಚಾಗಿ ಅನ್ಯರ ಶ್ರೇಷ್ಠತ್ವವು ಈಗಯಾರಿಗೂ ತಡೆಯದಾಗಿದೆ. ತಾವೇ ಆತ್ಮವಂಚಕರಾಗಿರುವದರಿಂದ ಈಗ ಯಾರೂ ಯಾರನ್ನೂ ನಂಬುವ ಹಾಗಿಲ್ಲ. ಇದ್ದದ್ದನ್ನು ಎಲ್ಲರೂ ಹಂಚಿಕೊಂಡು ತಿನ್ನುವ ಕ್ಷುದ್ರ ವೃತ್ತಿಯ ಕಠಿಣ ಕಾಲವಿದು. ಯಾಕಂದರೆ ಐಹಿಕ ಸುಖಕ್ಕಿಂತ ಹೆಚ್ಚಿನಸುಖವೇ ಇವರಲಕ್ಷದಲ್ಲಿ ಬರುವದಿಲ್ಲ. ಒಬ್ಬರಿಗೆ ಸ್ವಲ್ಪಹೆಚ್ಚು ಲಾಭವಾದರೆ ಈಗ ಸಹನವಾಗುವದಿಲ್ಲ. ತಮ್ಮ ಕರ್ತವ್ಯವನ್ನು ಬಿಟ್ಟಾದರೂ ಆ ಹೆಚ್ಚಿನ ಕ್ಷುದ್ರ ಲಾಭವನ್ನು ಕಸಿಮಕೊಳ್ಳುವದಕ್ಕಾಗಿ ಬಡಿದಾಡದೆ ಬಿಡರು. ಅಂದ ಬಳಿಕ ಇಂತಹ ಅಸಹಿಷ್ಣು ಸ್ಥಿತಿಯಲ್ಲಿ ಶಾಂತಿಯು ಹೇಗೆ ದೊರೆಯಬೇಕು? ಈಗಿನ ಕಾಲದ ಎಂತಹ ಸುಧಾರಿಸಿದ ರಾಷ್ಟ್ರವಿರಲಿ, ಎಂತಹ ಬಲಿಷ್ಠ ರಾಷ್ಟ್ರವಿರಲಿ ಅಲ್ಲಿ ಹೊರಗೆ ಝಗಝಗ ಒಳಗೆ ಭಗಭಗ ಎಂಬ ಸ್ಥಿತಿಯು ಇದ್ದೇತೀರಬೇಕು! ಅಲ್ಲಿಯ ಜನರ ಚಿತ್ತವೃತ್ತಿಯಲ್ಲಿ ಸ್ಥೈರ್ಯವೂ, ಅವರ ಸುಖಾಭಿಲಾಷೆಗೆ ಮೇರೆಯೂ ಇಲ್ಲದ್ದರಿಂದ ಅಲ್ಲಿಯ ಆಡಳಿತದ ಸತ್ತೆಗಳಲ್ಲಿಯೂ ಸ್ಥೈರ್ಯವು ಉಂಟಾಗದೆ, ಅವು ಕ್ಷಣಿಕವಾಗುತ್ತಿರುವವು. ಸತ್ತೆಯ ಅಗ್ರಪೂಜೆಯ ಮಾನವು ವಂಶಪರಂಪರೆಯಿಂದಂತು ಇರಲಿ, ಕೆಲವು ವರ್ಷಗಳಾದರೂ ಒಬ್ಬ ವ್ಯಕ್ತಿಯನ್ನು ಹೊಂದಿಕೊಂಡಿರುವದಿಲ್ಲ! ಒಟ್ಟಿಗೆ, ಅಂತಹ ದೇಶಗಳಲ್ಲಿ ಸೇವ್ಯವೃತ್ತಿಯೂ ಸ್ಥಿರವಾದದ್ದಲ್ಲ,

ಸೇವಕವೃತ್ತಿಯೂ ಸ್ಥಿರವಾದದ್ದಲ್ಲ. ಅಲ್ಲಿಂದ ಇಲ್ಲಿಯವರೆಗೆ ಅಸ್ಥಿರತ್ವದ ಸಾಮ್ರಾಜ್ಯವೇ ಸಾಮ್ರಾಜ್ಯವು! ಹೀಗಾಗಿ ಸೇವ್ಯ-ಸೇವಕ ವೃತ್ತಿಯ ಸೌಂದರ್ಯ - ಸ್ವಾರಸ್ಯಗಳೇ ಅವರಿಗೆ ಗೊತ್ತಾಗದಾಗಿವೆ. ಅಲ್ಲಿಯವರ ಪ್ರಜಾವಾತ್ಸಲ್ಯ-ರಾಜನಿಷ್ಠೆಗಳೆಂಬ ಪವಿತ್ರ ಭಾವಗಳೆರಡೂ ಅಹಂಕಾರದ ಸಂಸ್ಕಾರದಿಂದ ರೂಪಾಂತರಹೊಂದಿ, ಸ್ವಯಂ ಸತ್ತೆಯೆಂಬ ಸಂಬುದ್ಧ್ಯಾಕಾರ ವನ್ನು ಹೊಂದಿಬಿಟ್ಟಿವೆ. ಆ ಸ್ವಯಂ ಸತ್ತೆಯಾದರೂ ತಮ್ಮ ಹಾಗು ತಮ್ಮ ವರ ಸುಖಕ್ಕಾಗಿ ಇರುವದಲ್ಲದೆ, "ಸರ್ವೇಜನಾಃ ಸ್ಸುಖಿನೋಭವಂತು" ಎಂಬಂತೆ ಎಲ್ಲರ ಹಿತಕ್ಕಾಗಿ ಇರುವದಿಲ್ಲ. ಮುಣುಗಿಸಲಿಕ್ಕೆ ಬರುವಹಾಗಿಲ್ಲ ದಿದ್ದರೆ ಮಾತ್ರ ಅವರು ಎರಡನೆಯವರ ಹಿತವನ್ನು ಮುಣುಗಿಸವೆ ಇರು ವರು. ಒಬ್ಬರಿಗೇ ತಮ್ಮ ಹಿತ ಸಾಧಿಸಲಿಕ್ಕೆ ಬಾರದ್ದರಿಂದಲೇ ಅನ್ಯರನ್ನು ಹಿಂಡಿ ತಮ್ಮ ಹಿತ ಸಾಧಿಸುವದಕ್ಕಾಗಿ ಯಾವದೊಂದು ನೆವದಿಂದ ಅವರು ಒಟ್ಟುಗೂಡುತ್ತಿರುವರು. ಲೋಕದ ಸಾರ್ವತ್ರಿಕ ಹಿತಕ್ಕಾಗಿ ಒಟ್ಟುಗೂಡುವ ಉದ್ದೇಶವು, ಅಥವಾ ಅನ್ಯರನ್ನು ಒಟ್ಟುಗೂಡಿಸುವ ಉದ್ದೇಶವು ಸರ್ವಥಾ ಅವರದಿರುವದಿಲ್ಲ. ಸ್ವಾಮಿಯೂತಾನೇ, ಸೇವಕನೂತಾನೇ ಎಂಬ ಸ್ಥಿತಿಯು ಅವರದಾಗಿ ಹೋಗಿದೆ. ಅಂದಬಳಿಕ ಇಬ್ಬರ ಭಾರವನ್ನು ಒಬ್ಬರೇ ಹೊರುವ ಪ್ರಸಂಗಬರಲು, ಮನುಷ್ಯನು ತಾಪಪಡದೆ ಹೇಗೆ ಇದ್ದಾನು?

ಇಂತಹ ತಾಪಕ್ಕೆ ನಮ್ಮಲ್ಲಿಯ ಪೂರ್ವದ ರಾಜ- ಪ್ರಜರ ಸಂಬಂಧ ದಲ್ಲಿ ಆಸ್ಪದವು ಕಡಿಮೆಯಾಗಿತ್ತು. ಯಾಕಂದರೆ, ನಮ್ಮಲ್ಲಿ ರಾಜಪ್ರಜರ ಧರ್ಮಗಳನ್ನು ಹೇಳುವ ಮನುಸ್ಮೃತಿಯಂತಹ ಅಲೌಕಿಕ ಪುರುಷ ಪ್ರಣೀತ ಸಾರ್ವತ್ರಿಕ ಹಿತತತ್ವದ ಪೂಜ್ಯ ಗ್ರಂಥಗಳು ತ್ರಿಕಾಲಾಬಾಧಿತಗಳಂತೆ ಸ್ಥಿರ ತ್ವವನ್ನು ಹೊಂದಿಬಿಟ್ಟಿದ್ದವು.ಅಂತಹ ಸ್ಮೃತಿಗಳನ್ನು ನಿಸ್ಪೃಹತೆಯ ಜ್ಞಾನ ಬಲದಿಂದಲ್ಲದೆ ಸ್ವಾರ್ಥದ ಬಹುಮತದ ಬಲದಿಂದ ಬದಲಿಸಲಿಕ್ಕೆ ಬರುತ್ತಿ ದ್ದಿಲ್ಲ.ಆಪೂಜ್ಯರ ಗ್ರಂಥಗಳನ್ನು ಅನುಸರಿಸಿ ನಡೆಯುವ ನಿರ್ಬಂಧದ ಮೂಲ ಕ ಅರಸು-ಪ್ರಜೆಗಳಿಬ್ಬರೂ ಅವಕ್ಕೆ ಅಧೀನವಾಗಿರಬೇಕಾಗುತ್ತಿತ್ತು. ಈಗ ಲೋಕದ ಇಚ್ಛೆಯ ಬಹುಮತದಂತೆ ಕಾಯದೆಗಳು ಬದಲಾಗುವದಕ್ಕೆ ಆಸ್ಪದವಿರುವದರಿಂದ, ಸ್ವಾರ್ಥದ ಮೂಲಕ ಜನರ ಇಚ್ಛೆಗಳು ಉಚ್ಛೃಂಖ

ಲವಾಗಿ ಜನರಲ್ಲಿ ಸದಾ ಅಸಂತುಷ್ಟತೆಯು ಉತ್ಪನ್ನವಾಗುತ್ತಿರುವದು. ಆದರೆ ನಮ್ಮಲ್ಲಿ ರಾಜ-ಪ್ರಜರಿಬ್ಬರೂ ಬದಲಿಸಲಿಕ್ಕೆಬಾರದ ಮನುಸ್ಮೃತಿಯಂತಹ ಕಾಯಿದೆಯಂತೆ ನಡೆಯಲೇಬೇಕಾದದ್ದರಿಂದ ಅವರ ಸ್ವಚ್ಛಂದವೃತ್ತಿಯ ಇಚ್ಛೆಯ ಸಂಯಮನವಾಗಿ ಅವರವೃತ್ತಿಗಳು ಸ್ಥಿರವೂ, ವ್ಯವಸ್ಥಿತವೂ ಆಗಿ ದೇಶದಲ್ಲಿ ಶಾಂತಿಯು ನೆಲೆಗೊಳ್ಳುತ್ತಿದ್ದಿತು. ಆಧಾರದಲ್ಲಿಯೇ ಸ್ಥೈರ್ಯ ವಿಲ್ಲದಿದ್ದರೆ ಆ ಧೇಯವು ಹೇಗೆ ಸ್ಥಿರವಾಗಬೇಕು !

ಏನಾದರೂ, ಕಾಲಸ್ಥಿತಿಯು ಭಿನ್ನವಾದಂತೆ ರಾಜ್ಯದಾಡಳಿತದ ಪದ್ಧತಿಗಳು ಭಿನ್ನವಾಗಿಯೇ ತೀರುವವು. ಯಾರು ಬೇಡೆಂದರೂ, ಯಾರು ಏನು ಮಾಡಿದರೂ ಕೇಳುವದಿಲ್ಲ. ಈಗಿನ ಕಾಲಸ್ಥಿತಿಯಲ್ಲಿ ಶಾಸಕ-ಶಾಸ್ಯರಿಬ್ಬರಲ್ಲಿಯೂ ಅಧರ್ಮವು ಹೆಚ್ಚುವದರಿಂದ, ಪೃಥ್ವಿಯ ನಿಜವಾದ ಆಧಿಪತ್ಯವು ಯಾರಿಗೂ ದೊರೆಯದೆ ಹೋಗಲು, ರಾಜರಾಗಲಿ-ಪ್ರಜೆಗಳಾಗಲಿ ಪೃಥ್ವಿಯನ್ನು ಬಲಾತ್ಕರಿಸಹೋಗಿ ಪರಸ್ಪರ ಕಲಹ ಬೆಳೆಸಿ ಆಗಾಗ್ಗೆ ನಾಶವನ್ನು ಹೊಂದುವರು ! ಜಗತ್ತಿನ ಸ್ಥಿರತ್ವವು ಧರ್ಮಮೂಲವಾಗಿರುವದರಿಂದ, ಈಶ್ವರ ಕೃಪೆಯಿಂದ ಜಗತ್ತಿನಲ್ಲಿ ಧರ್ಮಪ್ರಸಾರವಾಗುವ ವರೆಗೆ ಪೃಥ್ವಿಯಲ್ಲಿ ನಿಜವಾದ ಆಧಿಪತ್ಯವು ಯಾರಿಗೂ ದೊರೆಯಲಾರದು. ಪೃಥ್ವಿಯ ನಿಜವಾದ ಆಧಿಪತ್ಯವು ಶಾಂತಿರೂಪವಾಗಿರುವದರಿಂದ, ಅಶಾಂತವಾದ ರಾಜಸತ್ತೆಯಾಗಲಿ, ಲೋಕಸತ್ತೆಗಳಾಗಲಿ ನಿಜವಾದ ಸತ್ತೆಗಳೇ ಅಲ್ಲ! ಧರ್ಮಿಷ್ಠವಾದ ರಾಜಸತ್ತೆಯೂ ಪ್ರಜಾ ಕ್ಷೇಮಕರವು, ಧರ್ಮಿಷ್ಠವಾದ ಲೋಕಸತ್ತೆಯೂ ಪ್ರಜಾ ಕ್ಷೇಮಕರವು. ಹಾಗೆ ಧರ್ಮಿಷ್ಠವಲ್ಲದ ರಾಜಸತ್ತೆಯು ಪ್ರಜೆಗಳನ್ನು ಮುರಿದು ತಿನ್ನುವದಾಗಿದ್ದರೆ, ಅಧರ್ಮಿಷ್ಠವಾದ ಲೋಕ ಸತ್ತೆಯು ಬಡಿದಾಡುತ್ತ ಬಡದಾಡುತ್ತ ಧರ್ಮಬಲದಿಂದಲ್ಲ, ಬಹುಮತದಬಲದಿಂದ ಬಲಿಷ್ಠರುಹೆಚ್ಚು, ದುರ್ಬಲರುಕಡಿಮೆ ಆಗಿ, ಅಥವಾ ಬಲಿಷ್ಠರು ಮೊದಲು, ಹೀನಬಲರು ಹಿಂದುಗಡೆಗೆ ಆಗಿ, ಅಥವಾ ಬಲಿಷ್ಠರ ಮುಖಾಂತರ ಹೀನಬಲರು ಹರಿದು ಹಂಚಿಕೊಂಡು ತಿನ್ನುವದಾಗಿರುವದು. ಹೇಗಿದ್ದರೂ ಅಧರ್ಮಿಷ್ಠವಾದ ಸುಖೇಚ್ಛೆಯ ರಾಜ್ಯಪದ್ಧತಿಯಲ್ಲಿ ಧರ್ಮಪ್ರಸಾರದಮೂಲಕ ಶಾಂತಿಯ ಪ್ರಸ್ಥಾಪನೆಯಾಗುವ ತತ್ತ್ವವು ಇರದೆ, ಬಲಿ

ಷ್ಠರು ದುರ್ಬಲರನ್ನು ಮುರಿದು ತಿನ್ನುವ ತತ್ವವೇ ಓತಪ್ರೋತವಾಗಿರು ವದು! ಇಂಥ ಪರರನ್ನು ತಿನ್ನುವ ಪದ್ಧತಿಗಳು ನ್ಯಾಯಮೂಲವಾಗಿರದೆ, ಎಂದೂ ತುಂಬದ ಆಶಾರೂಪವಾದ ತಗ್ಗನ್ನು ತುಂಬುವದಕ್ಕಾಗಿಯೇ ಇರು ವದರಿಂದ ಇವು ಜಗತ್ತಿಗೆ ತಾಪದಾಯಕಗಳಲ್ಲದೆ ಶಾಂತಿದಾಯಕಗಳಾಗ ಲಾರವು; ಆದ್ದರಿಂದ ರಾಜಸತ್ತೆಯಾಗಲಿ, ಮಹಾಜನಸತ್ತೆಯಾಗಲಿ, ಲೋಕ ಸತ್ತೆಯಾಗಲಿ, ಇವುಗಳ ಮಿಶ್ರ ಸತ್ತೆಗಳಾಗಲಿ ನಿಜವಾದ, ಅಂದರೆ ಶಾಂತಿ ದಾಯಕ ಸತ್ತೆಯಾಗಬೇಕೆಂದು ಇಚ್ಛಿಸುತ್ತಿದ್ದರೆ, ಧರ್ಮಾಚರಣೆಯಿಂದ ಪ್ರಜೆಗಳು ಆತ್ಮಶುದ್ಧಿಯುಳ್ಳವರಾಗಬೇಕು. ಆತ್ಮಶುದ್ಧಿಯಿಲ್ಲದವರ ಯಾವ ಸತ್ತೆಯೂ ಮಹತ್ವದ್ದಲ್ಲ; ಆದ್ದರಿಂದ ನಮ್ಮ ವೈದಿಕ ಆರ್ಯರ ಕರ್ತವ್ಯ ವು, ಧರ್ಮಬಲದಿಂದ ಆತ್ಮಶುದ್ಧಿಯನ್ನು ಪಡೆದು ರಾಜನಿಷ್ಠರಾಗುವದು. ರಾಜನು ಧರ್ಮಭ್ರಷ್ಟನಾದರೆ ಆತನು ನಮ್ಮ ಪ್ರಭುವೆಂಬದನ್ನು ಮರೆ ಯದೆ ವಿವಿಧೋಪಾಯಗಳಿಂದ ಆತನನ್ನು ಧರ್ಮಿಷ್ಠನನ್ನಾಗಿ ಮಾಡುತ್ತ, ಹಾಗೆ ಮಾಡುವದು ಸಾಧ್ಯವಾಗದ ಪಕ್ಷದಲ್ಲಿ ಹಿಂದೆ ಆಗಿರುವ ಬಹುಜನ ಧರ್ಮಿಷ್ಠ ರಾಜರ ಕಡೆಗೂ ಮುಂದೆ ಆಗಬಹುದಾಗಿರುವ ಬಹು ಜನ ಧರ್ಮಿಷ್ಠರಾಜರ ಕಡೆಗೂ, ಲಕ್ಷವಿಟ್ಟು, ಅಂತೇ ಹಿಂದುಮುಂದಿನ ವಿಚಾರ ಮಾಡಿ ಆತ್ಮಸಂಯಮನ ಮಾಡುತ್ತ ಕೆಟ್ಟದ್ದನ್ನು ಅಟ್ಟುವನೇ ಜಾಣನೆಂಬ ತತ್ವವನ್ನು ಅನುಸರಿಸಬೇಕಾಗುವದು. ಅದೇ ನಮ್ಮ ವೈದಿಕ ಆರ್ಯರ ಪವಿತ್ರ ಕರ್ತವ್ಯವು. ಈ ಕರ್ತವ್ಯದ ಯಥಾರ್ಥವಾದ ಸರಳ ಮಾರ್ಗವನ್ನು ನಾನು ಬರೆಯಬೇಕಾಗಿರುವ "ಸರಾಜಕತಾ" ಎಂಬ ಪುಸ್ತಕದಲ್ಲಿ ಯಥಾ ಮತಿ ಸಾಂಗೋಪಾಂಗವಾಗಿ ವಿವೇಚಿಸಬೇಕೆಂದಿದ್ದೇನೆ. ಶ್ರೀ ನಾಲ್ವಡಿ ಕೃಷ್ಣನ ಕೃಪೆಯಿಂದ ಆತನ ಪುಣ್ಯಭೂಮಿಯಲ್ಲಿಯೇ ಆತನ ಪುಣ್ಯದಿಂದ ಆ ಪುಸ್ತಕವು ಬರೆದು ಸಿದ್ಧವಾಗಿ ರಾಜನಿಷ್ಠೆಯ ಅಭಿವೃದ್ಧಿಗೆ ಕಾರಣವಾ ಗಬೇಕೆಂದು ನಾನು ಇಚ್ಛಿಸುವೆನು!



# ೨ ಗೃಹಶಿಕ್ಷಣ

ಅಥವಾ

# ಹಿರಿಯರ ಪುಣ್ಯ !!



## ವಿಷಯಪ್ರವೇಶ

**ಪು**ಣ್ಯಾತ್ಮರಾದ ಮಹರ್ಷಿಗಳ ಉಗಮಸ್ಥಾನವೆನಿಸುವ ನಮ್ಮ ಭರತ ಭೂಮಿಯ ಗೌರವವನ್ನೂ, ಅಲ್ಲಿಯ ಜನರ ಸದ್ವೃಢತೆ—ಸದ್ವೃತ್ತಿ—ಸದಾಚರಣೆ-ಸತ್ಪಕ್ಷಪಾತಿತ್ವ ಮೊದಲಾದವನ್ನು ಮೇಗಾಸ್ಥಿನೀಸನಂಥ ಪರದೇಶದ ಪ್ರವಾಸಿಗಳು ವರ್ಣಿಸಿದ್ದನ್ನೂ ಇತಿಹಾಸಜ್ಞರು ಬಲ್ಲರು. ಮಹಾಭಾರತ-ರಾಮಾಯಣಗಳಂಥ ನಮ್ಮ ಪವಿತ್ರವಾದ ಇತಿಹಾಸ ಗ್ರಂಥಗಳ ಅವಲೋಕನದಿಂದಂತು, ಈ ಮಾತಿನ ಸತ್ಯತೆಯು ಒಡೆದು ಕಾಣಿಸುತ್ತದೆ ; ಆದರೆ ಕಾಲಮಹಿಮೆಯಿಂದಲೋ, ನಮ್ಮ ದುಷ್ಕರ್ಮದಿಂದಲೋ, ಅಥವಾ ಸಹವಾಸ ವೈಚಿತ್ರ್ಯದಿಂದಲೋ ನಮ್ಮ ಶಾರೀರಿಕ-ಮಾನಸಿಕ ಸ್ಥಿತಿಗಳು ದಿನದಿನಕ್ಕೆ ಕೆಡುತ್ತ ನಡೆದಿರುವವೆಂಬದು ನೋಡಿದತ್ತ ಅನುಭವಕ್ಕೆ ಬರತೊಡಗಿದೆ ! ಮನುಷ್ಯನ ಅವನತಿಯ ಮುಖ್ಯ ಸಾಧನಗಳಾದ ಅಶಕ್ತತೆ-ಉದ್ಯೋಗಹೀನತೆ - ಅಸಂತುಷ್ಟತೆ - ಅಸೂಯೆ ಇವು ನಮ್ಮಲ್ಲಿ ಹೆಚ್ಚುತ್ತ ನಡೆದಿರುವದರಿಂದ, ನಮಗೆ ಸುಖವು ದೊರೆಯದಾಗಿದೆ. ದುರ್ಬಲಹೃದಯದ ನಮಗೆ ಉಂಡರೆ ಸುಖವಿಲ್ಲ-ಉಟ್ಟರೆ ಸುಖವಿಲ್ಲ; ಗಳಿಸಿದರೆ ಸುಖವಿಲ್ಲ-ವೆಚ್ಚಮಾಡಿದರೆ ಸುಖವಿಲ್ಲ; ವಿದ್ಯೆ ಕಲಿತರೆ ಸುಖವಿಲ್ಲ-ಕಲಿಯದಿದ್ದರೆ ಸುಖವಿಲ್ಲ ; ಒಬ್ಬರ ಆಳು ಆದರೆ ಸುಖವಿಲ್ಲ-ಒಬ್ಬರನ್ನು ಆಳು ಮಾಡಿಕೊಂಡರೆ ಸುಖವಿಲ್ಲ. ಒಟ್ಟಿಗೆ ನಾವು ಯಾತರಲ್ಲಿಯೂ ಸುಖವಿಲ್ಲೆಂದು ಸ್ಪಷ್ಟವಾಗಿ ಅನುಭವದಿಂದ ಹೇಳಹತ್ತಿದ್ದೇವೆ. ಇದು ನಮ್ಮ ಪೂಜ್ಯ ಋಷಿ ಪರಂಪರಾಗತ ಧರ್ಮಕ್ಕೆ ಎಷ್ಟು ವಿಪರೀತವಾಯಿತಲ್ಲ ! ಸುಖ-ದುಃಖಗಳ ವಿಚಾರಮಾಡದೆ, ಆದರಲ್ಲಿಯೂ ತಮ್ಮ ದುಃಖವನ್ನಂತು ಎಂದೂ

ಲಕ್ಷಿಸದೆ, ಜಾಜ್ವಲ್ಯವಾದ ತಪಸ್ಸಿನಿಂದಲೂ, ಮಹಾ ಪೌರುಷದಿಂದಲೂ ಜಗತ್ಕಲ್ಯಾಣ ನಿರತರಾಗಿದ್ದ ನಮ್ಮ ಜಗನ್ಮಾನ್ಯ ಋಷಿಗಳ ಧರ್ಮಾವಲಂಬಿಗಳೆನಿಸುವ ನಾವು, ಇಷ್ಟು ಅಳಬುರುಕರು ಯಾಕಾಗಿರಬಹುದು ? ಈ ಸ್ಥಿತಿಯು ಯಾವಾಗಾದರೂ ಇದ್ದದ್ದೋ, ಈಗ ನಮ್ಮ ಪಾಲಿಗೇ ಬಂದಿರುವದೋ ? ಈಗ ಕಲಿಯುಗವಿರುವದರಿಂದ ಪರಿಪರಿಯ ದುಃಖಗಳು ಒದಗತಕ್ಕವೇಯೆಂದು ವಾಡಿಕೆಯಾಗಿ ಹೇಳುವದು ನಿಜವಿರಬಹುದೋ ? ಈಗ ನಮ್ಮಲ್ಲಿ ಬೃಹಸ್ಪತಿಯಂತೆ ವಾಕ್ಪಾಂಡಿತ್ಯವು ಹೆಚ್ಚುತ್ತಲಿದೆ, ಮನನಶೀಲರಂತೆ ಗ್ರಂಥಾವಲೋಕನವು ಬಲಿಯುತ್ತಲಿದೆ, ಜಗತ್ಕಲ್ಯಾಣ ಕರ್ತೃಗಳಂತೆ ನಮ್ಮ ಲೇಖನ ವ್ಯವಸಾಯವು ಪಸರಿಸುತ್ತಲಿದೆ, ಉದ್ಯೋಗ ಶೀಲರಂತೆ ಕಾರ್ಯಾಂತರಗಳಲ್ಲಿ ಎಡತಾಕುವದು ಬೆಳೆಯುತ್ತಲಿದೆ; ಆದರೂ ನಮ್ಮ ಆತ್ಮಕ್ಕೆ ಶಾಂತಿಯಿಲ್ಲವಲ್ಲ ! "ಅಶಾಂತಸ್ಯ ಕುತಸ್ಸುಖಂ" ಎಂಬಂತೆ, ಈಗ ನಮಗೆ ಸುಖವು ಅಪರೂಪವಾಗಹತ್ತಿದ್ದರೆ ಆಶ್ಚರ್ಯವೇನು ?

ನಮಗೆ ಸುಖವಾಗಬೇಕಾದರೆ ಶರೀರ ಸಂಪತ್ತು, ಸದ್ಗುಣ ಸಂಪತ್ತು, ಉದ್ಯೋಗ ಸಂಪತ್ತು ಈ ಮೂರರ ಅವಶ್ಯವಿರುತ್ತದೆಂದು ನಮಗೆ ತೋರುತ್ತದೆ. ನಮ್ಮಲ್ಲಿ ಈ ಸಂಪತ್ತುಗಳ ಸಮೃದ್ಧಿಯಿದ್ದ ಮಾನದಿಂದ ನಮಗೆ ಚತುರ್ವಿಧ ಪುರುಷಾರ್ಥಗಳ ಪ್ರಾಪ್ತಿಯಾಗುವದು. ಈ ಮೂರು ಸಂಪತ್ತುಗಳಲ್ಲಿಯೂ ಆದ್ಯವಾದ ಶರೀರಸಂಪತ್ತು ಬಲು ಮಹತ್ವದ್ದಿರುವದು; ಆದ್ದರಿಂದಲೇ "ಶರೀರಮಾದ್ಯಂ ಖಲುಧರ್ಮಸಾಧನಂ" ಎಂದು ಜ್ಞಾನಿಗಳು ಹೇಳಿರುವರು ; ಆದರೆ ಈ ಮಹತ್ವದ ಆದ್ಯಸಂಪತ್ತು ನಮ್ಮಲ್ಲಿ ಎಷ್ಟಿರುತ್ತದೆಂಬವನ್ನು ಆಲೋಚಿಸಿದರೆ, ವಿಚಾರಶೀಲರ ಎದೆಯೊಡೆದು ನೀರಾಗದೆ ಹೋಗದು ! ನಾವು ನಮ್ಮ ತಾಯಿಯ ಹೊಟ್ಟೆಯಲ್ಲಿ ಮೂಡುವಾಗ, ನಮ್ಮ ತಾಯಿ-ತಂದೆಗಳ ಅಪಚಾರದಿಂದ ನಮ್ಮಲ್ಲಿ ಹಲವು ರೋಗಗಳು ಮೂಡಲು, ಆ ರೋಗಗಳ ಬಾಧೆಯಿಂದ ವಿಲಿವಿಲಿಯಾಗುತ್ತ ಗರ್ಭವಾಸದ ಕಷ್ಟವನ್ನು ಭೋಗಿಸಿ, ಹೇಗಾದರೂ ಒಮ್ಮೆ ನಾವು ಜನ್ಮ ಹೊಂದಿದೆವೆಂದರೆ, ಇಹಲೋಕದ ನಮ್ಮ ಕಷ್ಟಕ್ಕೆ ಆರಂಭವಾಗುವದು. ಜಾವಳವಿದ್ದರೆ ಮೂಗಿಲ್ಲ, ಮೂಗಿದ್ದರೆ ಜಾವಳವಿಲ್ಲ, ಮೂಗು - ಜಾವಳಗಳಿದ್ದರೆ ಧಷ್ಟ

ಪುಷ್ಟತೆಯಿಲ್ಲ. ಎಂಬ ಚಂದದಿಂದ ಹಲ್ಲಿಯ ಮರಿಯಂತೆ ಬಾಯಿಬಿಡುತ್ತ ಹುಟ್ಟುವ ತೇಜೋಹೀನವಾದ ಶಿಶುಗಳು ಈಗ ನಮ್ಮಲ್ಲಿ ನೂರಕ್ಕೆ ಎಷ್ಟು ಹುಟ್ಟುವವೆಂಬದನ್ನು ಕಣ್ದೆರೆದು ನೋಡತಕ್ಕದ್ದು! ಪರ್ವತದ ಕೋಡುಗಲ್ಲುಗಳನ್ನು ರಜಃಕಣವಾಗಿ ಹಾರಿಸುವ ಅಂಜನಾಮಾತೆಯ ಮೊಲೆಹಾಲಿನ ಧಾರೆಯನ್ನು ಮನದಣಿಯಾಗಿ ಕುಡಿದು, ಸ್ವಾಮಿಕಾರ್ಯವನ್ನು ತಲೆಯಲ್ಲಾಂತು ಮಾಡಿದ ಆಂಜನೇಯ ಸ್ವಾಮಿಯಂಥ ಮಹಾ ಸತ್ವಶಾಲಿಗಳು ನಮ್ಮ ಭರತಭೂಮಿಯಲ್ಲಿಯೇ ಆಗಿಹೋದರಲ್ಲವೆ? ಆದರೆ "ಪುನರ್ದರಿದ್ರೀ ಪುನರೇವ ಪಾಪೀ" ಎನ್ನುವಂತೆ, ಪಾಪಮೂಲಕ ದರಿದ್ರರಾಗಿ ಮತ್ತೆ ಮತ್ತೆ ಹುಟ್ಟುವ, ಮತ್ತೆ ಮತ್ತೆ ದರಿದ್ರರಾಗುವ ನಮ್ಮ ಭರತಖಂಡದ ಈಗಿನ ಎಷ್ಟು ಶಿಶುಗಳಿಗೆ ಹೊಟ್ಟೆತುಂಬುವ ಹಾಗೆ ಮೊಲೆಹಾಲು ದೊರೆಯುತ್ತಿರಬಹುದು? ಮತ್ತು ಎಷ್ಟು ಹುಡುಗರಿಗೆ ತಾಯಿಯ ಹಾಲು ಹೊಟ್ಟೆತುಂಬ ಉಂಡು ದಕ್ಕಿಸಿಕೊಳ್ಳುವ ತ್ರಾಣವಿರಬಹುದು? ಪ್ರಿಯ ವಾಚಕರೇ, ಎಂಥ ಪ್ರಸಂಗವಿದು! ಹೀಗೆ ಅಳುತ್ತ ಮೂಡಿ, ಅಳುತ್ತ ಬೆಳೆದು, ಅಳುತ್ತ ಹುಟ್ಟಿದ ನಾವು, ಕಡೆಗೆ ಅಳಬುರುಕರಾಗಿ ಅಳದಿಕ್ಕಿಯನ್ನು ಹೇಳುತ್ತ ಇಹಲೋಕದ ಯಾತ್ರೆಯನ್ನು ಮುಗಿಸಬೇಕಾಗುತ್ತದಲ್ಲವೆ? ಅಂದಬಳಿಕ ಪೌರುಷಪ್ರಾಪ್ತವಾದ ಚತುರ್ವಿಧ ಪುರುಷಾರ್ಥಗಳ ಗೊಡವೆ ನಮಗೇಕೆ?

ಹೀಗೆ ಗರ್ಭವಾಸವಾರಭ್ಯ ನಮ್ಮ ಶರೀರಸಂಪತ್ತು ನಷ್ಟವಾಗುತ್ತ ಬಂದದ್ದರಿಂದ, ಲೋಕದಲ್ಲಿ ನಮಗಾಗುತ್ತಿದ್ದ ಹಾನಿಯನ್ನೂ, ಅಪಮಾನವನ್ನೂ ಅಷ್ಟಿಷ್ಟೆಂದು ವರ್ಣಿಸುವ ಹಾಗಿಲ್ಲ. ಬಹು ದೊಡ್ಡ ಪುಣ್ಯರೂಪವಾದ ಬೆಲೆಯನ್ನು ಕೊಟ್ಟು, ಅಪರೂಪದ ಮನುಷ್ಯದೇಹವೆಂಬ ಈ ಯಂತ್ರ-ಸಂಪಾದಿಸುವ ಪ ತ್ರತೆಯನ್ನು ದೇವರಿಂದ ಜೀವನು ಸಂಪಾದಿಸುವನು; ಆದರೆ ದೇಹರೂಪ ಯಂತ್ರಮಾಡುವ ಗುತ್ತಿಗೆಗಾರರಾದ ತಾಯಿ-ತಂದೆಗಳು, ದುರ್ಲಕ್ಷ-ಅಜ್ಞಾನ-ವಿಷಯಾಸಕ್ತಿ-ಅದೂರದರ್ಶಿತ್ವ ಮೊದಲಾದ ದೋಷಗಳ ಬಲೆಗೆ ಬಿದ್ದು, ದೇಹರೂಪ ಯಂತ್ರದ ರಚನೆಯನ್ನು ಶಿಥಿಲವಾಗಿಯೂ, ಊನವಾಗಿಯೂ ಮಾಡುವರು; ಕಾರಣ, ಹುಟ್ಟಿದಂದಿನಿಂದ ಸಾಯುವವರೆಗೆ ಹಲವು ರೋಗಗಳ ತವರುಮನೆಯಾಗಿ, ಆ ರೋಗ

ಗಳ ನಿವಾರಣಕ್ಕಾಗಿ ಎಡತಾಕುವದರಲ್ಲಿ ನಮ್ಮ ಆಯುಷ್ಯದ ಬಹು ದೊಡ್ಡ ಭಾಗವನ್ನು ಕಳಕೊಳ್ಳಬೇಕಾಗುತ್ತದೆ. ಎರಡುದಿನ ನೆಟ್ಟಗಿದ್ದರೆ ಎರಡು ದಿನ ನೆಟ್ಟಗಿರಲಿಕ್ಕಿಲ್ಲವೆಂಬ ಚಂದದಿಂದ ಕಾಲಹರಣ ಮಾಡುತ್ತಿರುವ ನಮ್ಮಿಂದ, ಸತತವಾಗಿ ಉದ್ಯೋಗವು ಹೇಗಾಗಬೇಕು? ಸತತೋದ್ಯೋಗಿ ಗಳಲ್ಲದ ನಮ್ಮನ್ನು ವಿಜಯಲಕ್ಷ್ಮಿಯು ಅವಿಚ್ಛಿನ್ನವಾಗಿ ಹೇಗೆ ಆಶ್ರಯಿಸ ಬೇಕು? ಹೀಗೆ ಜಯಶಾಲಿಗಳಾಗಿರದ ನಮಗೆ ಸುಖವೆಲ್ಲಿಂದ ದೊರೆಯುವದು? ನಾವು ಸಂಸಾರದಲ್ಲಿ ಸದಾ ದುಃಖಿಗಳಾಗಲಿಕ್ಕೆ, ನಮಗೆ ಸಂಸಾರದಲ್ಲಿ ಹೆಜ್ಜೆ ಹೆಜ್ಜೆಗೆ ಆಗುತ್ತಿದ್ದ ಪರಾಜಯವೇ ಕಾರಣವಾಗಿರುತ್ತದೆಂದು ತಿಳಿಯಬೇಕು. ನಮ್ಮ ಅಶಕ್ತ ಪ್ರಕೃತಿಯಲ್ಲಿ ಮೂಲತಃ ಉಂಡ ಅನ್ನವನ್ನು ಅರಗಿಸುವ ಸಾಮರ್ಥ್ಯವಿಲ್ಲದ್ದರಿಂದ, ನಮ್ಮ ಉತ್ಸಾಹವೆಲ್ಲ ಕುಗ್ಗಿ ಹೋಗುವದು. ಈಗಿನ ಕಾಲದಲ್ಲಿ ಬಹುಜನರ ಅನುಭವಕ್ಕೆ ಬರುತ್ತಿರುವ ಈ ಶಾಶ್ವತ ನಿರುತ್ಸಾಹಕ್ಕೆ ಜಾಜ್ವಲ್ಯ ಪಚನಶಕ್ತಿಯಿಲ್ಲದ ಮೂಲಕ, ಅನ್ನದಿಂದ ನಮಗಾಗುವ ಪರಾಜಯವೇ ಕಾರಣವಾಗಿರುತ್ತದೆ! ಇವರಂತೆ, ಬಲಹೀನ ರಾದ ನಮ್ಮ ಮಾತು ಲೌಕಿಕದಲ್ಲಿ ನಡೆಯದೆ ಹೋಗುವದರಿಂದಲೂ, ಕೈ ಲಾಗದ ನಮ್ಮ ಬಯಕೆಗಳು ಪೂರ್ಣವಾಗದಿರುವದರಿಂದಲೂ, ಕ್ಷುದ್ರರಾದ ನಮಗೆ, ಅನ್ಯರು ಮಾತ್ರ ದೊಡ್ಡವರಾಗಿಯೂ, ಸುಖಿಗಳಾಗಿಯೂ ತೋರು ವದರಿಂದಲೂ ಹೆಜ್ಜೆ ಹೆಜ್ಜೆಗೆ ನಮ್ಮ ಪರಾಜಯವಾದಂತಾಗಿ, ನಮಗೆ ದುಃಖ ವಾಗುತ್ತದೆ. ಹೀಗೆ ನಮಗೆ ಮೇಲೆ ಮೇಲೆ ದುಃಖಗಳ ಅಘಾತವಾಗಿ ನಮ್ಮ ಉತ್ಸಾಹವು ಕುಗ್ಗಿ ಹೋಗುತ್ತದೆ! ಈ ಉತ್ಸಾಹಘಾತದಿಂದ ನಮ್ಮ ಸ್ವಾತಂತ್ರ್ಯ ಪ್ರೀತಿಯೇ ಅಳಿದುಹೋಗಿ, ಪಾರತಂತ್ರ್ಯರೂಪವಾದ ಕೆಟ್ಟ ರೋಗವು ನಮ್ಮನ್ನು ಅಂಟಿಕೊಳ್ಳುವದು.

ಪ್ರಿಯ ವಾಚಕರೇ, ನಾವು ಪಾರತಂತ್ರ್ಯ ರೋಗದಿಂದ ಪೀಡಿತರಾಗಿ ರುತ್ತೇವೆಂಬದಕ್ಕೆ ಸರಕಾರಿಯ ಕೆಲಸದ ಮೇಲಿರುವ ನಮ್ಮ ಅತ್ಯುತ್ಕಟ ಪ್ರೇಮವೊಂದು ಬಲವಾದ ಸಾಕ್ಷಿಯಾಗಿರುತ್ತದೆ. ಸ್ವತಂತ್ರವಾದ ಉದ್ಯೋ ಗಗಳನ್ನು ಮಾಡುವಾಗ ಬರುವ ವಿಘ್ನಗಳನ್ನು ನೀಗಲಿಕ್ಕೂ, ಉದ್ಯೋಗದ ಯೋಗ್ಯದಿಶೆಯನ್ನು ಕಂಡುಹಿಡಿಯಲಿಕ್ಕೂ, ಫಲದೃಷ್ಟಿಯಿಲ್ಲದೆ ಕರ್ತವ್ಯ

ದೃಷ್ಟಿಯಿಂದ ಸತತ ಪ್ರಯತ್ನ ಮಾಡಲಿಕ್ಕೂ ಬೇಕಾಗುವ ದೇಹದಾರ್ಢ್ಯ ಮನೋದಾರ್ಢ್ಯಗಳು ಇಲ್ಲದ್ದರಿಂದ, ನಾವು ಧೈರ್ಯಹೀನರೂ, ಉತ್ಸಾಹಹೀನರೂ ಆಗಿ ನೌಕರಿಯ ನೆವದಿಂದ ಒಬ್ಬರ ಆಶ್ರಯವನ್ನು ಬಯಸುತ್ತೇವೆ. ಹೀಗೆ, ದೌರ್ಬಲ್ಯದ ಮೂಲಕ ಪಾರತಂತ್ರ್ಯ, ಪಾರತಂತ್ರ್ಯದ ಮೂಲಕ ದೌರ್ಬಲ್ಯ ಇವುಗಳ ಪರಂಪರೆಯಿಂದ ನಾವು ದಿನದಿನಕ್ಕೆ ಹೆಚ್ಚು ಹೆಚ್ಚು ದುರ್ಬಲರೂ, ಪರತಂತ್ರರೂ ಆಗುತ್ತ ನಡೆದಿರುವೆವು. ನಮ್ಮ ತಂದೆ-ಅಜ್ಜ-ಮುತ್ತಂದಿರ ದೇಹದಾರ್ಢ್ಯ-ಮನೋದಾರ್ಢ್ಯಗಳನ್ನು ಕುರಿತು ವಿಚಾರಿಸಿದರೆ, ನಮಗಿಂತ ನಮ್ಮ ತಂದೆ ಗಟ್ಟಿಮುಟ್ಟು, ನಮ್ಮ ತಂದೆಗಿಂತ ನಮ್ಮ ಅಜ್ಜ ಗಟ್ಟಿಮುಟ್ಟು, ನಮ್ಮ ಅಜ್ಜನಿಗಿಂತ ನಮ್ಮ ಮುತ್ತಜ್ಜ ಗಟ್ಟಿಮುಟ್ಟು, ಎಂಬ ಮಾತು ಗೊತ್ತಾಗುವದು; ಇದಲ್ಲದೆ ನಮ್ಮ ಸಂತತಿಯು ಕ್ರಮವಾಗಿ ಅಶಕ್ತವಾಗುತ್ತ ಹೋಗುವ ಲಕ್ಷಣವು ನಮಗೆ ಒಡೆದು ಕಾಣುತ್ತಿರುವದು! ನಮ್ಮ ಸಂತತಿಯು ದಿನದಿನಕ್ಕೆ ಗಿಡ್ಡ, ಕೃಶ, ನಿಸ್ತೇಜ, ಹೊಟ್ಟೆತುಂಬ ಉಣ್ಣಲಾರದ್ದು, ಕೈಮುಟ್ಟಿ ದುಡಿಯಲಾರದ್ದು, ಬರಿಗಾಲಿಯಿಂದ ತಿರುಗಲಾರದ್ದು, ಪ್ರಸಂಗದಲ್ಲಿ ಮಂದಿಯನ್ನು ಗುದ್ದಲಾರದ ಮಂದಿಯ ಗುದ್ದನ್ನು ತಡಕೊಳ್ಳಲಾರದ್ದು, ಆಗುತ್ತ ನಡೆದಿರುವದು. ನಾವು ನಮ್ಮ ಸಂತತಿಗೆ ಮಾಡುವ ಆಶೀರ್ವಾದದಿಂದಲೂ ಇದೇ ಮಾತು ವ್ಯಕ್ತವಾಗುತ್ತದೆ— "ನಮ್ಮ ಹಿರಿಯರ ಕಸುವು ನಮಗಿಲ್ಲ, ನಮ್ಮ ಕಸುವು ನಮ್ಮ ಮಕ್ಕಳಿಗಿಲ್ಲ, ನಮ್ಮ ಮಕ್ಕಳ ಕಸುವು ಮುಂದಿನವರಿಗುಳಿಯುವದಿಲ್ಲ. ಇವರು ಹಿಂದಿನವರು ಮಾಡಿದ್ದನ್ನು ಕಾಯ್ದುಕೊಂಡರೆ ಸಾಕು. ಹೆಚ್ಚಾಗಿ ಮಾಡುವದಂತು ಮೇಲೆಯೇ ಕಾಣುತ್ತದೆ" ಎಂಬಿವೇ ಮೊದಲಾದ ಹಿರಿಯರ ಭವಿಷ್ಯವಾಣಿಗಳು, ನಾವು ಉತ್ತರೋತ್ತರ ದುರ್ಬಲರಾಗುವದನ್ನು ಸೂಚಿಸುತ್ತವಲ್ಲವೆ? ಇದು ಸರ್ವಥಾ ಸುಳ್ಳಲ್ಲೆಂದು ಹೇಳಬಹುದಾಗಿದೆ. ನಾವು ದಿನದಿನಕ್ಕೆ ಬಲಹೀನರಾಗುತ್ತ ನಡೆದಿದ್ದು, ಹೆಚ್ಚು ಹೆಚ್ಚು ಹೇಡಿಗಳಾಗ ಹತ್ತಿದ್ದೇವೆ. ನಾವು ಹೇಡಿಗಳಾದ್ದರಿಂದ, ನಮ್ಮ ಮಕ್ಕಳು ಕಿಡಿಗೇಡಿತನ, ಸ್ವಚ್ಛಂದವೃತ್ತಿ, ಅಟಗುಳಿತನ, ಮುಯ್ಯಕ್ಕೆ ಮುಯ್ಯತೀ

ಯುಕ್ತ ಗುಣಗಳನ್ನು ಕಂಡರೆ ನಾವು ಸೇರುವದಿಲ್ಲ. ಈ ಗುಣಗಳಿಗೆ ಚಾತುರ್ಯದಿಂದ ಯೋಗ್ಯ ಮಾರ್ಗವನ್ನು ತೋರಿಸದೆ, ಅವನ್ನು ಒಗ್ಗಿ ಬಡಿಯುವದಕ್ಕಾಗಿ ನಾವು ಮಕ್ಕಳನ್ನು ದುರ್ಲಕ್ಷದಿಂದ ದಂಡಿಸಿ ಅವರನ್ನು ಉಡಾಳರಾಗಿ ಮಾಡುವೆವು. ಬೈದು- ಅಂದು, ಹೊಡೆದು- ಬಡೆದು ಅವರನ್ನು ದೇವರಹಾಗೆ ಸುಮ್ಮನೆ ಕುಳಿತುಕೊಳ್ಳುವಂತೆ ಮಾಡುವೆವು! ಈ ಚಂದದಿಂದ ಪ್ರಾಯಕ್ಕೆ ಬಂದ ಮಕ್ಕಳು ಅಪ್ಪಿತಪ್ಪಿ ಸ್ವಪರಹಿತ ಸಾಧನಕ್ಕಾಗಿ ಏನಾದರೂ ಸಾಹಸಮಾಡಹೋದರೆ, ನಾವು ಹೇಡಿತನದಿಂದ ಅಂಜಿ ಅವರಿಗೆ—"ನೀವು ಇಲ್ಲದ ಉಸಾಬರಿಗೆ ಹೋಗಬೇಡಿರಿ, ದಿವಸ ಕಾಲ ಕಠಿಣ, ನಮ್ಮಷ್ಟಕ್ಕೆ ನಾವಿದ್ದರಾಯಿತು. ಯಾರ ಗೊಡವೆ ನಮಗೇನು? ಅದು ಗಟ್ಟಿಗರ ಕೆಲಸ; ನಮ್ಮಿಂದೇನಾಗುತ್ತದೆ? ನಾವು ಎಲ್ಲರಿಗೂ ಒಳ್ಳೆಯವರಾಗಿ ಹೋದರಾಯಿತು." ಇತ್ಯಾದಿ ಹೇಡಿತನದ ಉಪದೇಶ ಮಾಡಿ, ತರುಣರನ್ನು ಯಾವುದಕ್ಕೂ ಹರಿಯಗೊಡದೆ, ಅವರ ಉತ್ಸಾಹಶಕ್ತಿಯನ್ನು ಕುಗ್ಗಿಸಿ, ಅವರನ್ನು ಕೈಲಾಗದವರನ್ನು ಮಾಡುತ್ತೇವೆ. ಹೇಡಿಗಳಾದ ನಮಗೆ ಮುದುಕರ ಹಾಗೆ ಸುಮ್ಮನೆ ಕುಳಿತುಕೊಳ್ಳುವದು ಸೇರುತ್ತದೆ. ಆದರಿಂದ ನಾವು ಹುಡುಗರನ್ನೂ, ತರುಣರನ್ನೂ ಕೂಡ ಮುದುಕರನ್ನಾಗಿ ಮಾಡುತ್ತೇವೆ. ನಮ್ಮ ಈ ಹೇಡಿತನದ ದುಷ್ಟ ಪರಿಣಾಮವನ್ನು ಎಷ್ಟೆಂದು ವರ್ಣಿಸಬೇಕು! ಈ ಹೇಡಿತನದ ಮೂಲಕ ನಾವು ಎಷ್ಟೋ ಜನರು ರಾತ್ರಿ ಕತ್ತಲಲ್ಲಿ ಒಬ್ಬರೇ ಹೊರಗೆ ಹೋಗಲಿಕ್ಕೆ ಅಂಜುತ್ತೇವೆ; ಹೆಣವನ್ನು ಕಂಡರೆ ಮೋರೆ ಮುಚ್ಚಿಕೊಳ್ಳುತ್ತೇವೆ; ಬೆಂಕಿಬೆಳಕಿನ ಉಪದ್ರವವಾದರೆ ಸುಮ್ಮನೆ ನೋಡುತ್ತ ನಿಂತುಕೊಳ್ಳುತ್ತೇವೆ; ನೆರೆಮನೆಯನ್ನು ಕಳ್ಳರು ಸುಲಿಯುತ್ತಿದ್ದರೆ ಪಿಟ್ಟೆಂದು ಮಾತಾಡದೆ, ನಮ್ಮ ಬಾಗಿಲಿಗೆ ಒಸಿಕೆ ಮುಂಡಿಗಳನ್ನು ಆನಿಸುತ್ತೇವೆ! ಆದರೆ ನಮ್ಮ ಪೂರ್ವಜರು ಹೀಗೆಯೇ ಬಲಹೀನರೂ ಹೇಡಿಗಳೂ ಆಗಿದ್ದರೆಂದು ಇತಿಹಾಸ-ಪುರಾಣಗಳು ಹೇಳುತ್ತವೆಯೋ? ಇಲ್ಲ. ಅಂದಬಳಿಕ ಈಗೇ ನಾವು ಇಷ್ಟು ದುರ್ಬಲರೂ, ಹೇಡಿಗಳೂ ಯಾಕೆ ಆದೆವು? ಯಾಕಂದರೆ, ಮುಖ್ಯವಾಗಿ ನಮ್ಮ ಶರೀರ ಸಂಪತ್ತು ಹಾಳಾಗಿ ಹೋದದ್ದರಿಂದ!!

ನಮ್ಮ ಶರೀರ ಸಂಪತ್ತಿನ ಗತಿಯು ಹೀಗಾಗಿರುವಾಗ, ನಮ್ಮ ನೀತಿ ಸಂಪತ್ತಿನ ಗತಿಯು ಏನಾಗಿರುತ್ತದೆಂಬದನ್ನು ಕುರಿತು ವಿಚಾರಿಸುವಾ. ನಮ್ಮ ಈ ದೇಹರೂಪವಾದ ಯಂತ್ರವು, ನಿಕಟಸಂಬಂಧದ ನಮ್ಮ ಮುಖ್ಯ ಮನೆಯಾಗಿರುವದು. ಈ ಮನೆಯನ್ನು ಬಿಟ್ಟು ನಾವು ಎಂದೂ ಹೋಗಲಿಕ್ಕೆ ಬರುವದಿಲ್ಲ. ಬಹಳ ಹೇಳುವದರಿಂದೇನು? ಈ ಮನೆಯೆಂದರೆ ನಾವು, ನಾವೆಂದರೆ ಈ ಮನೆಯು ಎಂದು ಹೇಳಬಹುದು. ಈ ಮನೆಯನ್ನು ಬಿಟ್ಟು ಹೋದ ದಿವಸವೇ ನಮ್ಮ ಇಹಲೋಕದ ಯಾತ್ರೆಯು ಮುಗಿಯುವದು. ಇಂಥ ಮಹತ್ವದ ನಮ್ಮ ಮನೆಯೊಳಗಿನ ಬಹು ಬೆಲೆಯುಳ್ಳ ಮಹತ್ವದ ಸಂಪತ್ತೆಂದರೆ ನೀತಿಯು. ದೇಹರೂಪವಾದ ನಮ್ಮ ಮನೆಯ ಭದ್ರತೆಯು ಕಡಿಮೆಯಾಗಿರುವದರಿಂದಲೂ, ಕೆಲವು ಕಡೆಯಲ್ಲಿ ಮನೆಯು ಬಿದ್ದು ಸಹ ಹೋಗಿರುವದರಿಂದಲೂ ನಮ್ಮ ಈ ನೀತಿ ಸಂಪತ್ತನ್ನು ಗಟ್ಟಿಗರಾದ ಮೂವರು ಕಳ್ಳರು ಕದ್ದುಕೊಂಡು ಹೋಗುತ್ತಿರುವರು. ನೀಚತನದ ವಿಷಯಾಸಕ್ತಿ, ತಿರಸ್ಕರಣೀಯವಾದ ಅಹಂಭಾವ, ನಾಶಕಾರಕ ನಿರುದ್ಯೋಗ ಇವರೇ ನೀತಿಸಂಪತ್ತನ್ನು ಅಪಹರಿಸುವ ಕಳ್ಳರು! ಈ ಕಳ್ಳರು ಮುರುಕ ಮನೆಯೊಳಗಿನ ನಮ್ಮ ನೈತಿಕ ಸಂಪತ್ತನ್ನು ಕದ್ದುಕೊಂಡಷ್ಟೇ ಹೋಗುವರೆಂದು ತಿಳಿಯಬಾರದು, ತಮ್ಮ ಕಳವಿಗೆ ಅನುಕೂಲವಾಗುವಂತೆ ಈ ದೇಹರೂಪವಾದ ಮನೆಯನ್ನು ಶಿಥಿಲಮಾಡಲಿಕ್ಕೂ, ಅದಕ್ಕೆ ಅಲ್ಲಲ್ಲಿ ಹೊದರುಗಳನ್ನು ಕೆಡವಲಿಕ್ಕೂ ಇವರೇ ಕಾರಣರಾಗುವರು! ಈ ಕಳ್ಳರ ಹಾವಳಿಯಲ್ಲಿ, ನಮ್ಮ ಮನೆಯನ್ನು ಕಾಯುತ್ತಿದ್ದ ವಿವೇಕ ಪುರುಷನು ಹಣ್ಣಾಗಿ ನೆಲಹಿಡಿದಿರುವನು. ಹೀಗೆ, ಕಾವಲಿಲ್ಲದ ಮುರುಕ ಮನೆಯೊಳಗಿನ ನೀತಿ ಸಂಪತ್ತನ್ನು ಕಳ್ಳರು ಬೇಕಾದಾಗ ಕದ್ದೊಯ್ಯಹತ್ತಿದ ಬಳಿಕ, ನಾವು ದರಿದ್ರರು ಯಾಕಾಗಲಿಕ್ಕಿಲ್ಲ? ನಮ್ಮ ದೇಹಸಂಪತ್ತು ನಷ್ಟವಾದದ್ದರಲ್ಲಿ, ಈ ನೀತಿಸಂಪತ್ತಿನ ಹಾನಿಯೊಂದು ಕೂಡಿ ನಮ್ಮ ದಾರಿದ್ರ್ಯವು ಹೆಚ್ಚಾಗಿ ನಮ್ಮ ಯೋಗ್ಯತೆಯು ಜಗತ್ತಿನಲ್ಲಿ ತೀರ ಕ್ಷುದ್ರವಾಗಿರುವದು. ಮನೆಯು ಮುರುಕವಿದ್ದರೂ ಇರಲಿ-ಶಿಥಿಲವಿದ್ದರೂ ಇರಲಿ, ಒಳಗೆ ಗುಪ್ತವಾಗಿ ಬಹು ಜಾಗರೂಕತೆಯಿಂದ ಕಾದುಕೊಂಡಿದ್ದ ನೀತಿಸಂಪತ್ತಾದರೂ ನಮ್ಮಲ್ಲಿದ್ದರೆ,

ಮುರುಕ ಮನೆಯ ಸಾವಕಾರನಂತೆ ನಾವು ನಮ್ಮ ಗೌರವವನ್ನು ಕಾಯ್ದು ಕೊಳ್ಳಬಹುದಾಗಿತ್ತು; ಆದರೆ ನಮ್ಮ ಗೌರವದ ಮುಖ್ಯ ಕಾರಣವಾದ ನೀತಿಸಂಪತ್ತನ್ನು ನಾವು ಕಳೆದುಕೊಂಡುಬಿಟ್ಟಿರುವದರಿಂದ, ನಮ್ಮ ಬಾಳು ಯಾತಕ್ಕೂ ಬಾರದಾಗಿದೆ! ಕಲ್ಲು, ಮಣ್ಣು ಮೊದಲಾದ ಜಡಪದಾರ್ಥಗಳಿ ಗಾದರೂ ಬೆಲೆಯಿರುವದು, ನೀತಿಯಿಲ್ಲದ ಮನುಷ್ಯನಿಗೆ ಬೆಲೆಯಿರುವದಿಲ್ಲ!

ಈ ಸಂಬಂಧದಿಂದ ನನಗೆ ಪ್ರತ್ಯಕ್ಷ ಒದಗಿದ್ದೊಂದು ಪ್ರಸಂಗವನ್ನು ಇಲ್ಲಿ ಉಲ್ಲೇಖಿಸುವೆನು. ಹಿಂದಕ್ಕೆ ನಾನು ಅಗಡಿಯಲ್ಲಿ ಇದ್ದಾಗ ಒಮ್ಮೆ ನಾನೂರು ರೂಪಾಯಿಗಳ ಸಲುವಾಗಿ ಗುರುವರ್ಯರಾದ ಕೈ. ವಾ. ರಾವಜೀರಾವ ಕರಂದೀಕರ ಇವರ ಕಡೆಗೆ ಧಾರವಾಡಕ್ಕೆ ಹೋದೆನು. ಆಗ ಅವರು—

ಗುರುಗಳು—ಗಳಗನಾಥ, ಯಾಕೆ ನಡುವೆ ಬಂದೆ?

ಗಳಗನಾಥ—ಸ್ಟೇಶನಿಗೆ ಕಾಗದದ ಪಾರ್ಸಲು ಬಂದಿದೆ, ಡಂಬ್ರೇಜು ಬೀಳುವದು, ಇಂದೇ ನನಗೆ ನಾನೂರು ರೂಪಾಯಿ ಬೇಕಾಗಿ ರುವದರಿಂದ ಬಂದೆನು!

ಗುರುಗಳು—ಏನು ನೋಡಿ ನಿನಗೆ ನಾಲ್ಕು ನೂರು ರೂಪಾಯಿ ಕೊಡ ಬೇಕು!

ಗಳಗನಾಥ—ಪ್ರತ್ಯಕ್ಷ ತಮ್ಮ ಮುಂದೆ ನಿಂತಿರುವ ಗಳಗನಾಥನನ್ನು ನೋಡಿ.

ಗುರುಗಳು—ಗಳಗನಾಥನಿಂದ ಹಣಕೊಡುವದಾಗದಿದ್ದರೆ!

ಗಳಗನಾಥ—ಗಳಗನಾಥನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿಬರುವನು.

ಗುರುಗಳು—ನಿನ್ನಂಥ ಸಾಲಬುರುಕ ಹೇಸಿಮಗನು ನನಗೆ ಬೇಡ!

ಗಳಗನಾಥ—ಕ್ಷಮಿಸೋಣವಾಗಬೇಕು! ಗಳಗನಾಥನು ಈಗ ಹೇಸಿ ಯಾಗಿದ್ದರೂ, ತಮ್ಮಂಥ ತೇಜಸ್ವಿಗಳ ಹೊಟ್ಟೆಯಲ್ಲಿ ಹುಟ್ಟಿದಾಗ ತೇಜಸ್ವಿ ಯೇ ಆದಾನು!

ಗುರುಗಳು—ಗಳಗನಾಥ, ನೀನು ಇಂತಹ ಭಿಡೆಗೆ ನನ್ನನ್ನು ಹಾಕ ಬೇಡ ಹಣ ಮುಟ್ಟಿಸುವ ಬಗ್ಗೆ ನನಗೆ ನಂಬಿಗೆ ಮಾಡಿಕೊಟ್ಟ ಹೊರತು ಹಣವು ಸಿಗಲಾರದು!

ಗಳಗನಾಥ—ಏನುಮಾಡಿದರೆ ತಮಗೆ ನಂಬಿಗೆಯಾಗುವದು ?

ಗುರುಗಳು—ನಿನ್ನಲ್ಲಿದ್ದ ವಸ್ತ್ರ ಒಡಿವೆಗಳನ್ನು, ಅಥವಾ ಹೊಲ ವನ್ನು ಅಡವು ಇಡು !

ಗುರುಗಳ ಈ ಮಾತುಗಳನ್ನು ಕೇಳಿ ನನಗೆ ಬಹಳ ವಿಷಾದವಾಯಿತು. ನಾನು ಸ್ವಲ್ಪ ಹೊತ್ತು ಸುಮ್ಮನೆ ನಿಂತು ಆಮೇಲೆ ಸ್ಪಷ್ಟ ಮಾತಾಡುವ ಬಗ್ಗೆ ಗುರುಗಳಿಂದ ಅಭಿವಚನ ಪಡೆದು ಅವರನ್ನು ಕುರಿತು—

ಗಳಗನಾಥ—ತಮ್ಮ ಮಾತುಕೇಳಿ ನನಗೆ ಬಹಳವ್ಯಸನವಾಗುತ್ತದೆ. ಗಳಗನಾಥನ ಬಳಿಯಲ್ಲಿ ಒಸ್ತ್ರ ಒಡವೆಗಳೇನೂ ಇಲ್ಲೆಂಬದು ತಮಗೆ ಗೊತ್ತಿದ್ದ ಸಂಗತಿಯೇ ಆಗಿರುವದು. ಇನ್ನು, ಆತನು ತನ್ನ ಹೊಲವನ್ನು ಒತ್ತೀ ಹಾಕಬಹುದು. ಆದರೆ ಗಳಗನಾಥನಿಗಿಂತ ಗಳಗನಾಥನು ಸಂಪಾದಿಸಿದ ಒಸ್ತ್ರಒಡವೆ-ಹೊಲಮನೆಗಳಂಥ ಕ್ಷುದ್ರ ಜಡ ಪದಾರ್ಥಗಳೇ, ಸಾಮಾನ್ಯ ಧನಿಕರಂತೆ ತಮಗೂ ಮಹತ್ವದವಾಗಿ ತೋರಿದವಲ್ಲವೆ! ಗಳಗನಾಥನ ಚಿರಸಹವಾಸವು ತಮಗಿರುವದು. ಒಂದು ಪಕ್ಷದಲ್ಲಿ ಗಳಗನಾಥನ ಅಶಾಶ್ವತ ಜಡದೇಹವು ಬಿದ್ದು ಹೋದ ಪಕ್ಷದಲ್ಲಿ, ಅತನ ನಾಲ್ಕುನೂರು ರೂಪಾಯಿ ಮುಣುಗಿದರೆ ತಮ್ಮಂಥವರು ವ್ಯಸನಪಡುವಿರೋ ! ಹೀಗೆ ಚೈತನ್ಯಕ್ಕಿಂತ ಜಡಪದಾರ್ಥಕ್ಕೆ ಗೌರವವು ದೊರೆಯುವ ವರೆಗೆ, ಹಿಂದುಸ್ಥಾನದ ಉದ್ಧಾರವು ಹೇಗೆ ಆಗಬೇಕು !

ಗುರುಗಳು—ಗಳಗನಾಥ, ನಿನ್ನ ಮಾತಿಗೆ ನಾಲ್ಕು ನೂರು ರೂಪಾಯಿ ಕೊಡುತ್ತೇನೆ, ತಕ್ಕೊಂಡು ಹೋಗು.

ಪ್ರಿಯ ವಾಚಕರೇ, ನಾವು ನೀತಿಭ್ರಷ್ಟರಾದದ್ದರಿಂದಲೇ ನಮ್ಮ ಯೋಗ್ಯತೆಯು ಹೀಗೆ ಕಲ್ಲು-ಮಣ್ಣು-ಲೋಹಗಳಿಗಿಂತ ಕಡಿಮೆಯಾಗಿರುವದೆಂದು ತಿಳಿಯಬೇಕು. ಈಗ ತಂದೆಯ ಪತ್ತು ಮಗನಿಗಿಲ್ಲ-ಮಗನಪತ್ತು ತಂದೆಗಿಲ್ಲ; ಗಂಡನ ಪತ್ತು ಹೆಂಡತಿಗಿಲ್ಲ-ಹೆಂಡತಿಯ ಪತ್ತು ಗಂಡನಿಗಿಲ್ಲ; ಗುರುವಿನ ಪತ್ತು ಶಿಷ್ಯನಿಗಿಲ್ಲ-ಶಿಷ್ಯನ ಪತ್ತು ಗುರುವಿಗಿಲ್ಲ. ಇದರ ಮೇಲಿಂದ ಎಲ್ಲ ಕಡೆಗೂ ಅನೀತಿಮೂಲವಾದ ಪತ್ತುಗೇಡಿನ ಸಾಮ್ರಾಜ್ಯವಾಗಿರುವದೆಂದು ಹೇಳಬಹುದು.

ಇನ್ನು, ಉದ್ಯೋಗ ಸಂಪತ್ತನ್ನು ಕುರಿತು ವಿಚಾರಮಾಡಿದರಂತು ಮನಸ್ಸು ಜಡವಾಗಿ, ನಮಗೆ ಇನ್ನು ತರಣೋಪಾಯವು ಹೇಗೆ ದೊರೆಯು ಬಹುದೆಂದು ವ್ಯಸನಪಡುವ ಪ್ರಸಂಗವು ಒದಗಬಹುದಾಗಿದೆ. ಈಗಿನ ನಮಗೆ ಕೈತುಂಬ ದುಡ್ಡು ಬೇಕು; ಆದರೆ ಮೈಮುರಿದು ದುಡಿಯುವದು ಬೇಡ. ಈ ಉದ್ಯೋಗ ಸಂಪತ್ತಿನ ತಾಯಿಯು ಶರೀರಸಂಪತ್ತೂ, ತಂದೆಯು ನೀತಿಸಂಪತ್ತೂ ಎಂದು ಹೇಳಬಹುದು. ಯಾಕಂದರೆ, ಉದ್ಯೋಗಪ್ರವೃತ್ತಿಗೆ ಧಷ್ಟಪುಷ್ಟ ಪ್ರಕೃತಿಯು ಅವಶ್ಯವಿರುತ್ತದೆ; ಮತ್ತು ಉದ್ಯೋಗಾಭಿವೃದ್ಧಿಗೆ ನೀತಿಸಂಪತ್ತಿನ ಅವಶ್ಯವಿರುತ್ತದೆ; ಅಂದಬಳಿಕ ಅತ್ಯಂತ ಕೃಶವಾಗಿರುವ ನಮ್ಮ ಶರೀರಸಂಪತ್ತು-ನೀತಿಸಂಪತ್ತು ಎಂಬ ತಾಯಿ ತಂದೆಗಳಿಂದ ಹುಟ್ಟುವ ನಮ್ಮ ಉದ್ಯೋಗ - ಸಂಪತ್ತೆಂಬ ಮಗನು, ಎಷ್ಟು ಕೃಶನಾಗಿರ ಬಹುದೆಂಬುದನ್ನು ವಾಚಕರೇ ಕಲ್ಪಿಸತಕ್ಕದ್ದು. ದುಡಿತವು ಕಡಿಮೆಯಾಗಿ ಹೆಚ್ಚು ದುಡ್ಡು ಹೇಗೆ ಸಿಕ್ಕೀತ್ತೆಂಬದರ ಕಡೆಗೆ ನಮ್ಮ ವ್ಯವಹಾರವು ಈಗ ಭರದಿಂದ ಸಾಗಹತ್ತಿದೆ. ನಮಗೆ ಆರಾಮ ಬೇಕು, ಆಯಾಸವು ಬೇಡ; ನಮಗೆ ಎಲ್ಲವೂ ಅನಾಯಾಸವಾಗಿ ದೊರೆಯಬೇಕು! ಹೆಂಗಸರಿಗೆ ಮನೆಗೆಲಸವು ಕಡಿಮೆಯಾಗಿ ಹರಟೆಕೊಚ್ಚಲಿಕ್ಕೆ ಕಾಲವು ಬಹಳ ಉಳಿಯಬೇಕು. ಗಂಡಸರಿಗೆ ತರಬರಲಿಕ್ಕೆ ಆಯಾಸವು ಕಡಿಮೆಯಾಗಿ, ಹಾಳು ಉಸಾಬರಿ ಮಾಡಲಿಕ್ಕೆ ಹೆಚ್ಚುಕಾಲವು ಉಳಿಯಬೇಕು. ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸದ ಆಯಾಸವು ಕಡಿಮೆಯಾಗಿ, ಸರಕಾರಿ ನೌಕರಿಮಾಡಿ ದುಡ್ಡುಗಳಿಸಲಿಕ್ಕೆ ಬಹಳ ಕಾಲ ಉಳಿಯಬೇಕು; ಮುಖ್ಯಮಾತು, ತಪಶ್ಚರ್ಯವು ಯಾರಿಗೂ ಬೇಡ, ತಪಸ್ಸಿನ ಫಲವು ಮಾತ್ರ ಎಲ್ಲರಿಗೂ ಬೇಕು. ಬಹುತರ ಮೈಮುಚ್ಚಿಯುಳಿಸಿಕೊಳ್ಳುವದರ ಕಡೆಗೇ ಜನರ ಲಕ್ಷಬಹಳ. ಹೀಗಾಗಿ ಶ್ರಮಕ್ಕೆ ತಕ್ಕ ಫಲವನ್ನು ಕೊಡಲಿಕ್ಕೂ, ತಕ್ಕೊಳ್ಳಲಿಕ್ಕೂ ಯಾರೂ ಇಚ್ಛಿಸದೆ, ಅಲ್ಪಶ್ರಮಕ್ಕೆ ಬಹಳ ಫಲವನ್ನು, ಅಲ್ಪಫಲಕ್ಕೆ ಬಹಳ ಶ್ರಮವನ್ನು ಇಚ್ಛಿಸುವದು ಜನರ ವಾಡಿಕೆಯು ಆಚರಣೆಯಾಗಿದೆ; ಅಂದಬಳಿಕ ಕಡೆಪೂರಯಿಸದ ಈ ಆಚರಣೆಯಿಂದ ಯಾರಿಗೆ ಸುಖವಾಗಬೇಕು? ವ್ಯವಹಾರೋದ್ಯೋಗಗಳಾದರೂ ಸುಸೂತ್ರವಾಗಿಯೂ,ಪತ್ತಿಗೆಬಾಧೆಬಾರದಂತೆಯೂ

ಹೇಗೆ ನಡೆಯಬೇಕು? ಈಗ ತಕ್ಕ ಆಳು ಸಿಗುವದಿಲ್ಲೆಂದು ಒಕ್ಕಲಿಗರು ಒಕ್ಕಲತನ ಮುರಿಯಬೇಕಾಗಿರುವದು. ದುಡಿಸಿಕೊಳ್ಳುವವರ ತ್ರಾಸಬಹಳ ವೆಂದು ಆಳುಗಳು ಲಾವಣಿಯ ಹೊಲಹಿಡಿದು ಒಕ್ಕಲತನ ಮಾಡಲಿಕ್ಕೆ ಮುಂದುವರಿಯಬೇಕಾಗಿರುವದು. ಜಗ್ಗಲಾರದ ಎತ್ತು ಬಳಗ ಹೊಡೆಯು ವಂತೆ, ದುಡಿಯಲಾರದ ನಾವು ನಮ್ಮ ನಮ್ಮ ಉದ್ಯೋಗಗಳನ್ನು ಹಳಿ ಯುತ್ತ ಬಳಗಹೊಡೆದು ಬೇರೆ ಕೆಲಸಗಳನ್ನು ಹುಡುಕಹತ್ತಿರುವೆವು. ಕ್ರಿಯಾನಂತರಾಗಿ, ನಾವು ನಮ್ಮ ಕೆಲಸಗಳು ಪವಿತ್ರವಾದವೆಂದು ತಿಳಿದು ಆಸಕ್ತಿಯಿಂದ ದುಡಿಯುವದಿಲ್ಲ! ಕ್ರಿಯಾಭ್ರಷ್ಟರಾಗಿ, ನಮ್ಮ ಕೆಲಸವನ್ನು ಹಳಿಯುತ್ತ, ಬೇರೆಯವರ ಕೆಲಸಗಳನ್ನು ವರ್ಣಿಸುವೆವು. ಒಂದು ಕುಟುಂಬವಲ್ಲಿ ಒಬ್ಬನು ದುಡಿಯಬೇಕು, ಹತ್ತುಮಂದಿ ಉಣ್ಣಬೇಕು, ಎಂಬ ಸಿದ್ಧಾಂತವು ಸಾಧಾರಣವಾಗಿ ಶಿಷ್ಟಸಮ್ಮತವಾಗಿರುತ್ತದೆ. ಒಬ್ಬ ರಿಗೆ ಭಾರವಾಗಿ ಅವರಮೇಲೆ ಮುರಿದುಕೊಂಡು ಬೀಳಲಿಕ್ಕೆ ನಾವು ಬಲು ಶೂರರು! ನಮ್ಮ ಪ್ರೀತಿಯ ಜನರಿಗೆ ಚಿಕ್ಕಂದಿನಿಂದ ಉದ್ಯೋಗದ ಚಟಹಚ್ಚಿ ಅವರ ಜನ್ಮದ ಕಲ್ಯಾಣಮಾಡಲಿಕ್ಕೆ ನಾವು ಯತ್ನಿಸುವದಿಲ್ಲ; ಕೆಟ್ಟಮೋಹದ ಬಲೆಗೆ ಬಿದ್ದು, ಅವರನ್ನು ಅಚ್ಚೆಯಿಂದ ಸುಮ್ಮನೆ ಕೂಡಿಸಿ ಕೈಲಾದವ ರನ್ನಾಗಮಾಡಿ, ಅಥವಾ ಶ್ವವೃತ್ತಿಯ ನೌಕರಿಗಾಗಿ ನಿರುಪಯುಕ್ತಶಿಕ್ಷಣ ಕೊಡಿಸಿ ನಿಸ್ಸತ್ವರಾಗಮಾಡಿ ಅವರ ಜನ್ಮವು ಅಸಾರ್ಥಕವಾಗುವಂತೆ ಮಾಡ ಲಿಕ್ಕೆಮನಃಪೂರ್ವಕವಾಗಿ ಯತ್ನಿಸುತ್ತೇವೆ. ಇದರಿಂದ ಹುಡುಗರುಚಿಕ್ಕಂದಿ ನಲ್ಲಿ ಅಚ್ಚೆಯಿಂದ ನಿರುದ್ಯೋಗಿಗಳಾಗಿ ಸ್ವಚ್ಛಂದದಿಂದನಡೆಯುವರು; ತಾರು ಣ್ಯದಲ್ಲಿ ವಿಷಯೋಪಭೋಗಮಗ್ನರಾಗಿ ಕೆಲಸಕ್ಕೆ ಬಾರದವರಾಗುವರು; ಪ್ರೌಢವಯಲ್ಲಿ ಮೈಮುರಿದುದುಡಿಯದೆ ಅನ್ಯಾಯದಗಳಿಕೆಗೂ, ಗ್ರಾಮಕೀ ಟಕತನಕ್ಕೂ ಮೆಚ್ಚುವರು; ವೃದ್ಧಾಪ್ಯದಲ್ಲ ತಮ್ಮಿಂದ ಕೆಲಸವೇನೂ ಆಗದಿ ದ್ದರೂ ನಿರರ್ಥಕ ಒಟಗುಟ್ಟಿ ಸಂಸಾರ ತಾಪವನ್ನು ಹೆಚ್ಚಿಸುವರು.

ಹೀಗೆ, ಶರೀರಸಂಪತ್ತು, ನೀತಿಸಂಪತ್ತು, ಉದ್ಯೋಗಸಂಪತ್ತು ಈ ಮೂರರ ಕೊರತೆ ನಮ್ಮಲ್ಲಿ ಆಗುತ್ತ ಬರಲಿಕ್ಕೆ, ನಮಗೆ ಯೋಗ್ಯ ಗೃಹಶಿಕ್ಷ ಣವು ದೊರೆಯದೆ ಇರುವದೇ ಕಾರಣವಾಗಿರುತ ದೆ. ಇಂಥ ಸ್ಥಿತಿಯು ಒದಗ

ಲಿಕ್ಕೆ ಕೆಲಮಟ್ಟಿಗಾದರೂ ಪ್ರತಿಬಂಧವಾಗಬೇಕೆಂದು ನಾನು ಈಗ "ಗೃಹ ಶಿಕ್ಷಣ" ವೆಂಬ ವಿಷಯವನ್ನು ಯಥಾಮತಿ ಬರೆಯಲು ಉಪಕ್ರಮಿಸಿರುತ್ತೇನೆ.



# ಸರ್ವಸ್ವ-ಪಂಚಕ

ಎಂಬ

# ೫ ಪುಸ್ತಕಗಳು

## ಉಪೋದ್ಘಾತ

ಈ ಐದೂ ಪುಸ್ತಕಗಳು ಅತ್ಯಂತ ಗಂಭೀರವಾದವುಗಳು. ಇವು ಸಾರ್ವತ್ರಿಕ ವ್ಯವಹಾರೋಪಯುಕ್ತವಾಗಿದ್ದು, ಸಾಂಸಾರಿಕರಾದ ನಾವು ಸಂಸಾರದಲ್ಲಿದ್ದೇ ಪರಮಾರ್ಥವನ್ನು ಹೇಗೆ ಸಾಧಿಸಬೇಕೆಂಬದನ್ನು ತಿಳಿಸುವವು. ಈ ಉಪಯುಕ್ತ ಪುಸ್ತಕಗಳಲ್ಲಿಯ ವಿಷಯಗಳನ್ನೆಲ್ಲ ಈ ಚಿಕ್ಕ ಪುಸ್ತಕದಲ್ಲಿ ಒಂದೊಂದಾಗಿ ಉಲ್ಲೇಖಿಸುವದು ಅಶಕ್ಯವಾದದ್ದರಿಂದ, ಉಪೋದ್ಘಾತ ರೂಪದಿಂದ ಆ ಅಯ್ದೂ ಪುಸ್ತಕಗಳ ದಿಗ್ದರ್ಶನ ಮಾಡುವೆನು.

ತನಗೆ ತನಗಿಂತಲೂ ಹೆಚ್ಚು ಪ್ರಿಯವಾದದ್ದು ಮತ್ತೊಂದಿಲ್ಲವೆಂಬದು ಶ್ರುತಿ ಸಮ್ಮತವಷ್ಟೆ? ಈ ಆತ್ಮಪ್ರೇಮವು ಜೀವನಿಗೆ ಸ್ವಯಂ ಸಿದ್ಧವಾದದ್ದು. ಆತ್ಮನಲ್ಲಿಯೇ ರಮಮಾಣರಾದವರಿಗೆ ಈ ಆತ್ಮ ಪ್ರೀತಿಯಿಂದ ಅಖಂಡಾನಂದವೂ ಪ್ರಾಪ್ತವಾಗಬಹುದು; ಆದರೆ ಕ್ಷುದ್ರ ಜೀವರಾದ ನಮಗೆ ಈ ಅಂತರಾರಾಮಸ್ಥಿತಿಯು ಪ್ರಾಪ್ತವಾಗುವದು ಸುಲಭ ಸಾಧ್ಯವಲ್ಲ. ಯಾಕಂದರೆ, ಅಗಾಧವಾದ ಈ ಈಶ್ವರೀ ಸೃಷ್ಟಿಯಲ್ಲಿ ವ್ಯವಹರಿಸುವವರಿಗೆ ಅಂತರ್ಮುಖರಾಗಿ ಅಂತರಾರಾಮರಾಗುವದು ತೀರ ದುಸ್ತರವು. ಸೃಷ್ಟಿಯ ಕರ್ತಾರನಾದ ಪರಮಾತ್ಮನು ಜೀವರ ಇಂದ್ರಿಯಗಳನ್ನು ಬಹಿರ್ಮುಖವಾಗಿಯೇ ರಚಿಸಿರುವನೆಂದು ಶ್ರುತಿಯು ಹೇಳುವದರಿಂದ, ಜೀವರು ಸ್ವಾಭಾವಿಕವಾಗಿ ಅಂತರ್ಮುಖರಾಗಲಾರರು. ಅವರು ಇಂದ್ರಿಯಗಳ

ಆಧೀನತೆಯಿಂದ ಯಾವಾಗಲೂ ಬಹಿರ್ಮುಖರಾಗಿ ವಿಷಯಗಳಲ್ಲಿ ರಮಿಸಲು ಇಚ್ಛಿಸುವರು. "ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಂ ಪಶ್ಯತಿ ನಾಂತರಾತ್ಮನ್" ಎಂಬ ಶ್ರುತಿಯು ಇದೇ ಮಾತನ್ನು ಹೇಳುವದು. ಅಂದ ಬಳಿಕ ಸೃಷ್ಟಿಯಲ್ಲಿ ವ್ಯವಹರಿಸುತ್ತಿರುವ ನಮಗೆ ಸೃಷ್ಟಿಯನ್ನು ನೋಡುವದು ತಪ್ಪಿದ್ದಲ್ಲ. ತ್ರಿಗುಣಗಳ ವಿಷಮತೆಯಿಂದ ಉತ್ಪನ್ನವಾಗಿರುವ ಈ ಸೃಷ್ಟಿಯು, ನಮ್ಮ ಗುಣಗಳ ವಿಷಮತೆಯಿಂದ ನಮಗೆ ವಿಷಮವಾಗಿ ತೋರುವದು ಸ್ವಾಭಾವಿಕವು. ನಮ್ಮ ಗುಣಗಳ ವಿಕಾರಕ್ಕನುಸರಿಸಿ ಸೃಷ್ಟಿಯಲ್ಲಿಯ ವಸ್ತುಗಳು ನಮಗೆ ಒಮ್ಮೆ ಅನುಕೂಲವಾಗಿ ತೋರುತ್ತವೆ, ಒಮ್ಮೆ ಪ್ರತಿಕೂಲವಾಗಿ ತೋರುತ್ತವೆ. ಅನುಕೂಲವಾಗಿ ತೋರಿದಾಗ ನಮಗೆ ಅವುಗಳಿಂದ ಸುಖವಾಗುತ್ತದೆ; ಪ್ರತಿಕೂಲವಾಗಿ ತೋರಿದಾಗ ದುಃಖವಾಗುತ್ತವೆ. ಹೀಗಾಗಿ ಸೃಷ್ಟಿಯಲ್ಲಿಯ ಜೀವರು ನಾವು ಸುಖ ದುಃಖಗಳ ಇರುಕಿನಲ್ಲಿ ಸಿಕ್ಕು ಒದ್ದಾಡುತ್ತಿರುವೆವು. ಈ ಒದ್ದಾಟವು ತಪ್ಪಿ ಯಾವಾಗಲೂ ನಾವು ಸುಖದಲ್ಲಿಯೇ ಇರಬೇಕೆಂದು ಇಚ್ಛಿಸುತ್ತಿದ್ದರೂ, ಅಖಂಡವಾದ ಸುಖವು ಅಥವಾ ಆನಂದವು ನಮ್ಮ ಆಯುಷ್ಯದಲ್ಲಿಯೇ ಪ್ರಾಪ್ತವಾಗದ್ದರಿಂದ, ಕಡೆಗೂ ನಾವು ನಿರಿಚ್ಛರಾಗದೆ, ಕರ್ಮಪ್ರವಾಹಕ್ಕನುಸರಿಸಿ ವಾಸನಾ ಪರರಾಗಿ ದೇಹಯಾತ್ರೆಯನ್ನು ಮುಗಿಸುವೆವು.

ಹೀಗೆ ನಾವು ವಾಸನಾಪರರಾಗಿ ಈವರೆಗೆ ಎಷ್ಟು ದೇಹಯಾತ್ರೆಗಳನ್ನು ಮುಗಿಸಿರುವೆವೆಂಬದು ಒಬ್ಬ ಪರಮಾತ್ಮನಿಗೆ ಗೊತ್ತು! ಹೀಗೆ ಸುಖದುಃಖಗಳೆಂಬ ದ್ವಂದ್ವದ ಕಾಟವು ನಮ್ಮ ಇಚ್ಛೆಯಿಲ್ಲದಿದ್ದರೂ ನಮ್ಮ ಬೆನ್ನುಹತ್ತಿ ಯಾಕೆ ಇರಬೇಕು? ಕೇವಲ ಸುಖವೇ ಬೇಕೆಂದು ಇಚ್ಛಿಸುತ್ತಿರುವ ನಮಗೆ ಅದು ಏಕೆ ಪ್ರಾಪ್ತವಾಗಬಾರದು? ಜಗತ್ತಿನಲ್ಲಿ ಸರ್ವಸುಖಿಯಾದವನು ಒಬ್ಬನೂ ಇರಬಾರದೇ? ಎಂಬ ಪ್ರಶ್ನೆಗಳು ನಮ್ಮ ಮನಸ್ಸಿನಲ್ಲಿ ಉತ್ಪನ್ನವಾಗುವವು; ಆದರೆ ಬರಿಯ ಪ್ರಶ್ನೆಗಳು ಉತ್ಪನ್ನವಾಗುವದರಿಂದ ಆಗುವದೇನು? ನಾವು ಇಚ್ಛಿಸಿದ ಮಾತ್ರದಿಂದ ಯಾವ ಕೆಲಸಗಳೂ ಆಗುವದಿಲ್ಲ. "ಇಚ್ಛಾಮಾತ್ರಂ ಪ್ರಭೋಃಸೃಷ್ಟಿಃ" ಎಂಬ

ಉಕ್ತಿಯು ಜ್ಞಾನ - ಸ್ವರೂಪನೂ, ಸತ್ಯಸಂಕಲ್ಪನೂ, ಅಮೋಘ ಶಕ್ತಿ ಯುತನೂ ಆದ ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಾತ್ಮನಿಗೊಬ್ಬ ನಿಗೆ ಹತ್ತುವದು; ಆದರೆ ಜೀವರು ನಾವು ಅಜ್ಞಾನಿಗಳು, ಭ್ರಷ್ಟಸಂಕಲ್ಪರು, ಅಶಕ್ತರು ಆದ್ದರಿಂದ ಶ್ರುತಿಯು ಘೋಷಿಸಿದಂತೆ "ಜಾನಾತಿ, ಇಚ್ಛತಿ, ಯತತೇ" ಅಂದರೆ ತಿಳಿಯುವದು, ಇಚ್ಛಿಸುವದು, ಯತ್ನಮಾಡುವದು ಎಂಬ ಕ್ರಮವನ್ನು ಅನುಸರಿಸಬೇಕಾಗುವದು. ನಾವು ಏನನ್ನಾದರೂ ಬರಿಯ ತಿಳಿದ ಮಾತ್ರದಿಂದ ಕಾರ್ಯವಾಗುವದಿಲ್ಲ, ಬರಿಯ ನಮ್ಮ ಇಚ್ಛೆಯಿಂದಲೂ ಕಾರ್ಯವಾಗುವದಿಲ್ಲ, ಬರಿಯ ನಮ್ಮ ಯತ್ನದಿಂದಲೂ ನಮ್ಮ ಉದ್ದಿಷ್ಟ ಕಾರ್ಯವು ಸಾಧಿಸುವದಿಲ್ಲ. ಈ ಮರ್ಮವನ್ನು ಅರಿಯದೆ ಎಷ್ಟೋ ಜನರು ಈ ತ್ರಯಿಯಲ್ಲಿಯ ಒಂದೊಂದರ ಬೆನ್ನುಹತ್ತಿ ಏನೇನೋ ಆಗಿಹೋಗಿರುವರು. ಹಾಗೆ ಮಾಡುವದು ಯೋಗ್ಯವಲ್ಲ. ಮೊದಲು ನಾವು ಸತ್ಸಮಾಗಮದಿಂದ ಹಿತಾಹಿತಗಳ ಕಾರ್ಯಸ್ವರೂಪಗಳನ್ನು ಅರಿತುಕೊಳ್ಳಬೇಕು; ಬಳಿಕ ಸಜ್ಜನರ ಪ್ರೇರಣೆಯಿಂದ ಹಿತಸಾಧನದಲ್ಲಿ ಉತ್ಕಟೇಚ್ಛೆಯನ್ನು ತಾಳಬೇಕು; ಆಮೇಲೆ ಸತ್ಸಹಾಯದಿಂದ ಹಿತಕ್ಕಾಗಿ ಯತ್ನಿಸಬೇಕು. ಅಂದರೆ ನಮ್ಮ ಸದಿಚ್ಛೆಯು ಫಲಿಸಿ ನಮಗೆ ಸುಖವುಂಟಾಗುವದು. ಪರಮಾತ್ಮನ ಮಾತು ಹಾಗಲ್ಲ. ಆತನು ಜ್ಞಾನ ಸ್ವರೂಪನೂ, ಸಿರಿಚ್ಛನೂ, ಸಿದ್ಧಫಲನೂ ಆಗಿರುವದರಿಂದ ಆತನ ಜಾನಾತಿ-ಯತತೇ ಎಂಬ ಕ್ರಿಯೆಗಳು ಆತನ ಇಚ್ಛಾಶಕ್ತಿಯಲ್ಲಿಯೇ ಅಡಕವಾಗಿರುವದರಿಂದ ಆತನ ಇಚ್ಛಾ ಮಾತ್ರವಾಗಿ ಸೃಷ್ಟಿಯಾಗುವದು ಸ್ವಾಭಾವಿಕವು! ಆದರೆ ಕ್ಷುದ್ರ ಮಾನವರಿಗೆ ಇವರ ಗೊಡವೆಯೇಕೆ?

ಅಂತಹ ಸತ್ಸಂಗವೂ, ಸತ್ಪ್ರೇರಣೆಯೂ, ಸತ್ಸಹಾಯವೂ ಎಲ್ಲರಿಗೂ ದೊರೆಯುವ ಸಂಭವವಿಲ್ಲ. ಮನುಷ್ಯತ್ವವೂ, ಮುಮುಕ್ಷುತ್ವವೂ, ಮಹಾಪುರುಷ ಸಂಶ್ರಯವೂ ದುರ್ಲಭವೆಂದು ಶ್ರೀಮದಾಚಾರ್ಯರ ಉಕ್ತಿಯನ್ನು ಉದಹರಿಸಿ ಹಿಂದೆಯೊಮ್ಮೆ ಹೇಳಿರುತ್ತದೆ. ಅದರಂತೆ ಸತ್ಸಂಗವು ಅತ್ಯಂತ ದುರ್ಲಭವಾಗಿದ್ದರೂ, ಸಜ್ಜನ ಪ್ರಣೀತ ಧರ್ಮವು ನಮ್ಮ ಇಚ್ಛೆಯಿದ್ದರೆ ಸುಲಭವಾಗಿ ನಮಗೆ ಲಭಿಸಬಹುದಾಗಿರುತ್ತದೆ. ಸಜ್ಜನರು ಜಗತ್ತಿಗೇ

ಶಾಂತಿಯನ್ನು ಒದಗಿಸಿಕೊಡುವದಕ್ಕಾಗಿ ಧರ್ಮರೂಪದಿಂದ ಸದಾ ಸಿದ್ಧರಾಗಿರಲು, ನಾವೇಕೆ ಧರ್ಮಾಶ್ರಯವನ್ನು ಮಾಡಬಾರದು? ಇನ್ನು ಧರ್ಮವು ಶ್ರುತಿ-ಸ್ಮೃತಿ-ಸದಾಚಾರಾತ್ಮಕವಾಗಿದ್ದು, ಅದನ್ನು ಕೇವಲ ಸಜ್ಜನರೂಪವೆಂದು ಹೇಳುವ ಕಾರಣವೇನೆಂತಲೂ, ಧರ್ಮಕ್ಕೆ ಶ್ರುತಿ-ಸ್ಮೃತಿಗಳ ಸಂಬಂಧವಿಲ್ಲವೋ ಎಂತಲೂ ಪ್ರಶ್ನಮಾಡಬಹುದು; ಆದರೆ ಈ ಪ್ರಶ್ನಕ್ಕೆ ಕೊಡುವ ಉತ್ತರವನ್ನು ವಿವೇಕದಿಂದ ವಿಚಾರಿಸಬೇಕೆಂದು ಹೇಳಿಕೊಳ್ಳುವೆವು. ಈಶ್ವರ ವಾಣಿಯನ್ನು ಈಶ್ವರ ಪ್ರೀತಿಗೆ ಪಾತ್ರರಾದ ಸಜ್ಜನರು ಕೇಳಿದ್ದರಿಂದಲೇ ಆ ವಾಣಿಗೆ ಶ್ರುತಿ ಎಂದು ಹೆಸರು ಬಂದಿತು. ಸಜ್ಜನರು ಆ ಕೇಳಿದ ಈಶ್ವರವಾಣಿಯ ಮನನಮಾಡಿ ಲೋಕಕಲ್ಯಾಣಕ್ಕಾಗಿ ವಿಸ್ತರಿಸಿದ್ದರಿಂದಲೇ ಸ್ಮೃತಿಗಳು ಉಂಟಾದವು; ಆ ಈಶ್ವರೀ ವಾಣಿಯ ಉದ್ದೇಶವನ್ನರಿತು ದೇಶ-ಕಾಲ-ಪರಿಸ್ಥಿತಿಗಳಿಗೆ ಅನುಸರಿಸಿ ಸಜ್ಜನರು ನಡೆದದ್ದೇ ಸದಾಚಾರವಾಯಿತು; ಅಂದಬಳಿಕ ಶ್ರುತಿ-ಸ್ಮೃತಿ-ಸದಾಚಾರಗಳ ಆಧಾರವು ಸಜ್ಜನರೇ ಆದದ್ದರಿಂದ ಅವರೇ ಲೋಕಗುರುಗಳು; ಅವರು ಈಶ್ವರನಿಗೆ ಸಮಾನರು; ಅಥವಾ ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ ಈಶ್ವರ - ಸದ್ಗುರು ಎಂಬವೆರಡು ಪರಮಾತ್ಮನ ರೂಪಗಳು! ಈಶ್ವರನ ಕೆಲಸವು ಸೃಷ್ಟಿ - ಸ್ಥಿತಿ - ಲಯಗಳಿಂದ ಸೃಷ್ಟಿಯನ್ನು ಪ್ರವಾಹರೂಪದಿಂದ ನಡೆಸುವದು; ಸಜ್ಜನರ ಕೆಲಸವು ಮುಮುಕ್ಷುಗಳನ್ನು ಉದ್ಧರಿಸುವದು. ದೇವರು ನಾವು ಬೇಡಿದ್ದನ್ನು ಕೊಡುವವನು, ಸಜ್ಜನರು ನಮಗೆ ಹಿತವಾದದ್ದನ್ನು ಕೊಡುವವರು! ಅಂತೇ ಶ್ರುತಿಯು— "ಯಸ್ಯದೇವೇ ಪರಾಭಕ್ತಿರ್ಯಥಾದೇವೇ ತಥಾ ಗುರೌ | ತಸ್ಯೈತೇ ಕಥಿತಾಹ್ಯರ್ಥಾಃಪ್ರಕಾಶಂತೇ ಮಹಾತ್ಮನಃ" ಎಂದು ಹೇಳುತ್ತಿರುವದು; ಆದ್ದರಿಂದಲೇ ಧರ್ಮವನ್ನು ಸಜ್ಜನಪ್ರಣೀತವೆಂದು ಹೇಳಿರುವೆವು. ಧರ್ಮಾಶ್ರಯವನ್ನು ಮಾಡಿದರೆ ನಮಗೆ ಸದಾಶ್ರಯವು ದೊರೆತಂತಾಗುವದು. ನಾವು ಧರ್ಮಜೀವರಾಗಿ ವ್ಯವಹರಿಸಹತ್ತಿದರೆ ಸಜ್ಜನರ ಪ್ರತ್ಯಕ್ಷ ಸಮಾಗಮದ ಯೋಗವು ತಾನಾಗಿ ಒದಗಿಬರಬಹುದು; ಆದ್ದರಿಂದ ಹಿತೇಚ್ಛುವು ಧರ್ಮರಕ್ಷಣಮಾಡಿ ತಾನೂ ಸುರಕ್ಷಿತನಾಗಿ ಶಾಂತಿಯನ್ನು ಪಡೆಯಬೇಕು.

ಧರ್ಮವೆಂದರೇನು ? ಧರ್ಮ ಶಬ್ದಾರ್ಥದಲ್ಲಿ ಏನೇನೋ ಅಡಕವಾಗಿ ಹೋಗುತ್ತಿರುವವಲ್ಲ ? ಎಂಬ ಪ್ರಶ್ನವೊಂದು ಇಲ್ಲಿ ಮುಂದೆ ಬರಬಹುದು; ಆದರೆ " ಧಾರಯತೀತಿ ಧರ್ಮಃ " ಎಂಬ ಧರ್ಮಶಬ್ದದ ವ್ಯಾಖ್ಯೆಯಂತೆ, ಇಲ್ಲಿ ನಾವು, ಮನುಷ್ಯನು ಶಾಂತಿಯಿಂದ ಚ್ಯುತಿಹೊಂದದಂತೆ ಅವನ ಧಾರಣ ಮಾಡುವದೇ ಧರ್ಮವೆಂದು ಹೇಳುವೆವು. ಶಾಂತಿಭಂಗಕ್ಕೆ ಅಹಂಕಾರ ಮಮಕಾರಗಳು ಕಾರಣವಾಗಿರುವವು. ಅಹಂಕಾರವೆಂದರೆ, ನಾನು ಸೃಷ್ಟಿ ಯನ್ನು ನೋಡುವವನು ಎಂಬ ಭಾವವೆಂದು ಇಲ್ಲಿ ತಿಳಿಯತಕ್ಕದ್ದು. ಮಮ ಕಾರವೆಂದರೆ, ಸೃಷ್ಟಿಯೊಳಗಿನ ಈ ವಸ್ತುವು ನನ್ನದೆಂಬ ಭಾವವು. ಈ ಎರಡೂ ಭಾವಗಳ ಮೂಲಕ ಜೀವನು-" ತಾನು, ತನ್ನ ವಸ್ತುವಿನ ಆನು ಕೂಲ್ಯ, ತನ್ನ ವಸ್ತುವಿನ ಪ್ರಾತಿಕೂಲ್ಯ " ಎಂಬ ಮೂರು ಬಗೆಯ ಇರತ ಗಳಿಂದ ಗಾಸಿಯಾಗುತ್ತಿರುವನು ! ತನ್ನ ಆನುಕೂಲ್ಯದಿಂದ ಅವನು ಸುಖ ವೆಂಬ ವಿಕಾರಕ್ಕೆ ಒಳಗಾಗುವನು ; ತನ್ನ ಪ್ರಾತಿಕೂಲ್ಯದಿಂದ ದುಃಖ ವೆಂಬ ವಿಕಾರಕ್ಕೆ ಒಳಗಾಗುವನು. ಈ ಸುಖ ದುಃಖಗಳ ಇರತದ ಬಗೆ ಯನ್ನೂ, ಪ್ರಕಾರಗಳನ್ನೂ ವರ್ಣಿಸುವದು ಯಾರಿಗೂ ಶಕ್ಯವಲ್ಲ. ಈ ಇರತವು ಕಡಿಮೆಯಾಗುತ್ತ ಹೋಗಬೇಕಾದರೆ, ಅಹಂಕಾರಿಯಾದ ಜೀವನು ತಾನು ಜಗತ್ತಿನವನಾಗುತ್ತ ಜಗತ್ತಿನಲ್ಲಿ ಕೂಡಿ ಹೋಗಬೇಕು ; ಅಥವಾ ಜಗತ್ತನ್ನು ತನ್ನದಾಗಿ ಮಾಡಿಕೊಳ್ಳುತ್ತ ಜಗತ್ತನ್ನು ತನ್ನಲ್ಲಿ ಕೂಡಿಸಿ ಕೊಂಡುಬಿಡಬೇಕು ; ಆದರೆ ಗುರುತ್ವದ ತಾರತಮ್ಯದ ದೃಷ್ಟಿಯಿಂದ ನೋಡಿದರೆ, ಜಗತ್ತನ್ನು ತನ್ನದಾಗಿ ಮಾಡಿಕೊಳ್ಳುತ್ತ, ಜಗತ್ತನ್ನು ತನ್ನಲ್ಲಿ ಕೂಡಿಸಿಕೊಂಡುಬಿಡುವದು ಕ್ಷುದ್ರ ಜೀವನಿಗೆ ಶಕ್ಯವಲ್ಲ ; ಆದ್ದರಿಂದ ಜೀವನು ತಾನೇ ಜಗತ್ತಿನವನಾಗುತ್ತ ಜಗತ್ತಿನಲ್ಲಿ ಕೂಡಿಹೋಗಬೇಕು.

ಆದರೆ ಈ ಮಾತು ಹೇಳಲಿಕ್ಕೆ ಸುಲಭವಾದಷ್ಟು ನಡೆಯಲಿಕ್ಕೆ ಸುಲಭ ವಾಗಿರುವದಿಲ್ಲ. ತಟ್ಟನೆ ಜಗತ್ತಿನವನಾಗುವ ಸಾಮರ್ಥ್ಯವು, ಅಥವಾ ಜಗದ್ಭಾವದಲ್ಲಿ ಕೂಡಿಕೊಳ್ಳುವ ಸ್ವಾತಂತ್ರ್ಯವು ಜೀವನಿಗೆ ಇರುತ್ತಿದ್ದರೆ, ಆತನು ವಿಷಯ ಪರತಂತ್ರನಾಗಿ ಇಷ್ಟೇಕೆ ತೊಳಲುತ್ತಿದ್ದನು ? ಎಂಬ ಪ್ರಶ್ನವು ಬರುವದು ; ಆದರೆ ಈ ಪ್ರಶ್ನವು ಸರ್ವಥಾ ಅಯೋಗ್ಯವಾದ

ದ್ದಲ್ಲ. ಜೀವನು ಕೇವಲ ಪರತಂತ್ರನಾದದ್ದರಿಂದ ಪರಮಾತ್ಮನ ಸಹಾಯವಿಲ್ಲದೆ ಆತನು ಜಗದ್ಭಾವವನ್ನು ತಾಳಲಾರನು. ಜೀವನ ಈ ಬಗೆಯ ಉದ್ಧಾರಕ್ಕಾಗಿಯೇ ಪರಮಾತ್ಮನು ತನ್ನ ಮಾಯೆಯಿಂದ, ಅಥವಾ ತನ್ನ ಶಕ್ತಿಯಿಂದ ಈ ಸೃಷ್ಟಿಯನ್ನು ನಿರ್ಮಿಸಿರುವನು ; ಆದ್ದರಿಂದ ಪಾಮರರಾದ ಜೀವರು ನಾವು ಸತ್ಸಮಾಗಮಮಾಡಿ ಈ ಈಶ್ವರೀಮಾಯೆಯ ಅಥವಾ ಸೃಷ್ಟಿಯ ಸಹಾಯದಿಂದ ಜಗತ್ತಿನವರಾಗುತ್ತ - ಜಗದ್ಭಾವದಲ್ಲಿ ಬೆರೆಯುತ್ತ ಉದ್ಧೃತರಾಗಬೇಕಾಗುವದು. ಹೀಗೆ ಈ ಈಶ್ವರೀ ಮಾಯೆಯು ಜೀವರ ಉದ್ಧಾರಕ್ಕಾಗಿಯೇ ಇರುವದೆಂಬ ಮಾತು ಶ್ರೀಮದ್ಭಾಗವತದಲ್ಲಿ ಹೇಳಿರುವದು. ಹೀಗೆ ಪಾಮರರಾದ ಜೀವರಿಗೆ ಈಶ್ವರೀ ಮಾಯೆಯು ಸಹಾಯಕವಾಗಿದ್ದರೂ, ಅವರ ಅಲ್ಪ ಶಕ್ತಿಯ ಮೂಲಕ ತಟ್ಟನೆ ಅವರ ಉದ್ಧಾರವಾಗಲಾರದು ; ಅಥವಾ ಒಮ್ಮೆಲೆ ಅವರು ಅಹಂಕಾರ-ಮಮಕಾರಗಳನ್ನು ಬಿಡಲಾರರು ; ಆದ್ದರಿಂದ ಜೀವನು ಸಂಸಾರಿಯಾಗಿಯೇ ಜಗದ್ಭಾವವುಳ್ಳವನಾಗುವದಕ್ಕಾಗಿ ಕ್ರಮವಾಗಿ ಐದು ಮೆಟ್ಟಲುಗಳಲ್ಲಿ ಬೇರೆ ಬೇರೆ ಭಾವಗಳುಳ್ಳವನಾಗುತ್ತ ಕಡೆಗೆ ಸಂಸಾರಿ ಜೀವನು ಜಗದ್ಭಾವವುಳ್ಳವನಾಗಬೇಕಾಗುವದು. ಆ ಐದು ಮೆಟ್ಟಲುಗಳೇ— "೧ ದಂಪತಿಭಾವ. ೨ ಕುಟುಂಬ ಭಾವ. ೩ ಸಮಾಜಭಾವ. ೪ ರಾಷ್ಟ್ರಭಾವ. ೫ ವಿಶ್ವಭಾವ ಅಥವಾ ಜಗದ್ಭಾವ" ಎಂಬವು. ಈ ಐದೂ ಭಾವಗಳಿಗೆ ಅವವುಗಳ ಸ್ವರೂಪದ ಮೇಲಿಂದ ಕ್ರಮವಾಗಿ ಸಂಸಾರ-ಸರ್ವಸ್ವ, ಶಿಕ್ಷಣ - ಸರ್ವಸ್ವ, ಕರ್ತವ್ಯ ಸರ್ವಸ್ವ, ಸುಖಸರ್ವಸ್ವ, ಆನಂದ - ಸರ್ವಸ್ವ ಎಂದು ಬೇರೆ ಹೆಸರುಗಳನ್ನು ಕೊಟ್ಟಿರುತ್ತದೆ. ಈ ಐದೂ ಸರ್ವಸ್ವಗಳು ಸಫಲವಾಗಬೇಕಾದರೆ, ಮನುಷ್ಯನು ಸತ್ಸಮಾಗಮದಿಂದ ಆಯಾ ಸರ್ವಸ್ವಗಳ ಧರ್ಮಗಳನ್ನರಿತು ಧರ್ಮಾಶ್ರಯವನ್ನು ಮಾಡಬೇಕಾಗುವದು. ಅಂದರೆ ಆತನು ತನ್ನ ದಾಂಪತ್ಯವು ಸಫಲವಾಗುವದಕ್ಕಾಗಿ ದಂಪತಿಗಳ ಧರ್ಮವನ್ನೂ, ತನ್ನ ಕುಟುಂಬವು ಸಫಲವಾಗುವದಕ್ಕಾಗಿ ಕುಟುಂಬದ ಧರ್ಮವನ್ನೂ, ತನ್ನ ಸಮಾಜವು ಸಫಲವಾಗುವದಕ್ಕಾಗಿ ಸಮಾಜದ ಧರ್ಮವನ್ನೂ, ತನ್ನ ರಾಷ್ಟ್ರ-ವಿಶ್ವಗಳು ಸಫಲವಾಗುವದಕ್ಕಾಗಿ ಅವವುಗಳಧರ್ಮಗಳನ್ನೂ ಪಾಲಿಸ

ಬೇಕಾಗುವದು; ಆದರೆ ಆಯಾ ಧರ್ಮಗಳ ಸ್ವರೂಪವೇನು? ಆಯಾ ಧರ್ಮಗಳನ್ನು ಪಾಲಿಸುವಾಗ ಮನುಷ್ಯನು ಹೇಗೆ ಹೇಗೆ ತಪಸ್ವಿಯಾಗಬೇಕಾಗುವದು? ಹಾಗೆ ತಪಸ್ವಿಯಾಗುವಾಗ ಹೇಗೆ ಹೇಗೆ ಸ್ವಾರ್ಥವನ್ನು ತ್ಯಜಿಸಬೇಕಾಗುವದು? ಇತ್ಯಾದಿ ವಿಷಯಗಳನ್ನು ವಿವರಿಸುವದಕ್ಕಾಗಿ ಒಂದೊಂದು ಸರ್ವಸ್ವವನ್ನು ಕುರಿತು ಒಂದೊಂದು ಪುಸ್ತಕವನ್ನು ಬರಯಬೇಕೆಂದು ಮಾಡಿದ್ದೇನೆ. ಈ ಐದೂ ಪುಸ್ತಕಗಳು ಮನುಷ್ಯಜನ್ಮದ ಸಾರ್ಥಕತೆಯ ದೃಷ್ಟಿಯಿಂದ ಸಾಂಸಾರಿಕರಿಗೆ ಅತ್ಯುಪಯುಕ್ತವಾದವುಗಳಿರುವವೆಂಬದರಲ್ಲಿ ಸಂಶಯವಿಲ್ಲ.

ಈ ಐದೂ ಪುಸ್ತಕಗಳಲ್ಲಿ ಯಾವ ಯಾವ ವಿಷಯಗಳ ವಿವೇಚನವಾಗಬೇಕಾಗಿರುವದೆಂಬದನ್ನು ಇಲ್ಲಿ ನಿಷ್ಕರ್ಷವಾಗಿ ಹೇಳುವದು ಸ್ಥಳ ಕಾಲಗಳ ಸಂಕೋಚಗಳ ಮೂಲಕ ಶಕ್ಯವಲ್ಲ. ಯಾವ ಕೆಲಸವನ್ನೇ ಆಗಲಿ, ಕೆಲಸ ಮಾಡಿದ ಬಳಿಕ ಹೀಗೆಹೀಗೆ ಮಾಡಿದೆನೆಂದು ಹೇಳುವದರಲ್ಲಿ ಯಾಥಾರ್ಥ್ಯವು ಇರುವಂತೆ, ಕೆಲಸಮಾಡುವ ಮೊದಲು ಹೀಗೆ ಹೀಗೆ ಕೆಲಸಮಾಡುವೆನೆಂದು ಹೇಳುವದರಲ್ಲಿ ಯಾಥಾರ್ಥ್ಯವು ಇರುವದಿಲ್ಲ. ಇದೇ ಮಾತು ಲೇಖಗಳಿಗೂ ಹತ್ತುವದು. ಲೇಖಗಳನ್ನು ಬರೆಬರೆಯುತ್ತ ವಿಚಾರಗಳು ಹೇಗೆ ಹೇಗೆ ಬದಲಾಗುವವೆಂಬದನ್ನು ಮೊದಲೇ ಹೇಳುವದು ಸಾಧ್ಯವಲ್ಲ. ಪ್ರತಿ ಒಂದು ಸರ್ವಸ್ವದ ಪುಸ್ತಕದಲ್ಲಿ ಹಲವು ಪ್ರಕರಣಗಳು ಬರಬಹುದಾಗಿದ್ದರೂ, ಆ ಪ್ರಕರಣಗಳ ಮೂಲ ತತ್ವಗಳ ಸರ್ವಸಾಧಾರಣ ಸ್ವರೂಪವು ಮನಸ್ಸಿನಲ್ಲಿ ಬರುವದಕ್ಕಾಗಿ, ವಿವೇಚಿಸತಕ್ಕ ಮುಖ್ಯ ವಿಷಯಗಳು ಹನ್ನೆರಡು ಆಗಬಹುದೆಂದು ನಾನು ಈಗ ತರ್ಕಿಸಿದ್ದೇನೆ. ಅವು ಯಾವವೆಂದರೆ—೧ ಸಂಘಟನೆ, ೨ ಸಂಬಂಧಗಳ ತಾರತಮ್ಯ, ೩ ಸುಖ ದುಃಖಗಳ ಮೂಲ, ೪ ಯಾಜಮಾನ್ಯ, ೫ ಅಂಗಾಂಗಿಭಾವ, ೬ ಸಂಬಂಧ ಶೈಥಿಲ್ಯದ ಕಾರಣ, ೭ ಸಂಬಂಧಗಳ ದೃಢೀಕರಣದ ಉಪಾಯ, ೮ ರಕ್ಷಣ, ೯ ಶಿಕ್ಷಣ, ೧೦ ಸಂವರ್ಧನ, ೧೧ ಸಾಫಲ್ಯ, ೧೨ ಶಾಂತಿ. ಈ ಹನ್ನೆರಡು ವಿಷಯಗಳೂ ಪ್ರತಿ ಒಂದು ಸರ್ವಸ್ವದಲ್ಲಿ ವಿವೇಚಿಸಲ್ಪಡುವವು. ಪ್ರತಿ ಒಂದು ಸರ್ವಸ್ವದ ಸಂಬಂಧದಿಂದ ಸ್ಫುರಿಸಿದ ಕೆಲವು ಸಂಗತಿಗಳನ್ನು ನೆನಪಿಗಾಗಿ ಕೆಳಗೆ ಟಿಪ್ಪಣಿಮಾಡಿ ಇಟ್ಟಿರುವೆನು.

## ೩ ದಂಪತಿಗಳು

ಅಥವಾ

## ಸಂಸಾರ ಸರ್ವಸ್ವ

ಇದರಲ್ಲಿ ದಂಪತಿಗಳ ಘಟನೆಯ ಸ್ವರೂಪವನ್ನು ಹೇಳಿ, ಗಂಡ ಹೆಂಡಿರು ತಮ್ಮ ಪ್ರೇಮುವನ್ನು ಪರಸ್ಪರರಲ್ಲಿ ಹಂಚಿ ಅವರು ಏಕ ಜೀವರು ಹೇಗೆ ಆಗಬೇಕೆಂಬದನ್ನು ತಿಳಿಸುವಾಗ ಮೇಲಿನ ಉಪೋದ್ಘಾತದಲ್ಲಿಯ ಹನ್ನೆರಡು ಭಾಗಗಳಲ್ಲಿಯ ವಿಷಯಗಳನ್ನು ವಿವರಿಸಬೇಕಾಗುವದು. ದಂಪತಿಗಳು ಏಕಜೀವರಾಗಲಿಕ್ಕೆ ಈಶ್ವರೀ ಮಾಯೆಯ ಬಲವತ್ತರ ಸಹಾಯವು ಇದ್ದರೂ, ಪ್ರೇಮುವ ಶುದ್ಧೀಕರಣಕ್ಕೆ ಸತ್ಸಂಗವೂ, ಧರ್ಮಾಚರಣೆಯೂ ಬೇಕಾಗುವವು. ಸತ್ಸಂಗದಿಂದ ದಂಪತಿಗಳ ಧರ್ಮವು ಗೊತ್ತಾಗುವದು. ಧರ್ಮಾಚರಣೆಯಿಂದ ಪ್ರೇಮುವು ಶುದ್ಧವಾಗುವದು. ದಂಪತಿಗಳ ಏಕ ಜೀವವೇ ಸಂಸಾರ ವೃಕ್ಷದ ತಾಯಿ ಬೇರಾದದ್ದರಿಂದ, ದಂಪತಿಗಳ ಏಕ ಜೀವಕ್ಕೆ ಅಥವಾ ದಾಂಪತ್ಯಕ್ಕೆ ಸಂಸಾರಸರ್ವಸ್ವವೆಂಬ ಹೆಸರನ್ನು ಕೊಟ್ಟಿರುತ್ತದೆ. ಮನುಷ್ಯೇತರ ಪ್ರಾಣಿಗಳಲ್ಲಿಯೂ ಈ ದಾಂಪತ್ಯ ಪ್ರೇಮುವು ಕಂಡು ಬರುವದರಿಂದ, ಈ ಪ್ರೇಮುವು ಪ್ರಾಣಿಮಾತ್ರಗಳಿಗೆ ಸಂಬಂಧಿಸಿದ್ದು. ಇದೇ ಸೃಷ್ಟಿಯ ಮೂಲಾಧಾರವು. ದಾಂಪತ್ಯವನ್ನು ತಾಯಿಬೇರು ಮುಖ್ಯವಾಗಿ ಉಳ್ಳ ಸಂಸಾರ ವೃಕ್ಷವೆಂದು ಕರೆಯಬಹುದು.



## ೪ ಕುಟುಂಬ

ಅಥವಾ

## ಶಿಕ್ಷಣ ಸರ್ವಸ್ವ

ಇದರಲ್ಲಿ ಕುಟುಂಬ ಘಟನೆಯ ಸ್ವರೂಪವನ್ನು ಹೇಳಿ, ಕುಟುಂಬದೊಳಗಿನವರು ತಮ್ಮ ತಮ್ಮ ಪ್ರೇಮುವನ್ನು ಪರಸ್ಪರರಲ್ಲಿ ಹಂಚಿ, ಕುಟುಂಬವು ಏಕಜೀವವು ಹೇಗಾಗಬೇಕೆಂಬದನ್ನು ತಿಳಿಸುವಾಗ ಮೇಲಿನ ಉಪೋದ್ಘಾತದಲ್ಲಿಯ ಹನ್ನೆರಡು ಭಾಗಗಳಲ್ಲಿಯ ವಿಷಯಗಳನ್ನು ವಿವರಿಸಬೇಕಾ

ಗಿರುವದು. ಕುಟುಂಬದ ಈ ಪ್ರೇಮ-ವಿಭಜನಕ್ಕೆ ಈಶ್ವರೀ ಮಾಯೆಯ ಸಹಾಯವು ದಂಪತಿಗಳಷ್ಟು ಬಲವತ್ತರವಾಗಿ ದೊರೆಯದು; ಆದ್ದರಿಂದ ದಂಪತಿಗಳಲ್ಲಿಯಂತೆ ಸತ್ಸಂಗ, ಧರ್ಮಶ್ರದ್ಧೆಗಳಲ್ಲಿ ಹೆಚ್ಚು ಆಸಕ್ತಿಯನ್ನು ತಾಳಿ, ಕೌಟುಂಬಿಕ ಸುಖವನ್ನು ಹೆಚ್ಚಿಸಿಕೊಂಡಹೊರತು ದಂಪತಿಗಳ ಸುಖವು ಶಾಶ್ವತವೂ, ಸಫಲವೂ ಆಗದೆಂದು ತಿಳಿಯಬೇಕಾಗುವದು. ಸತ್ಸಂಗದಿಂದ ಕೌಟುಂಬಿಕ ಧರ್ಮದ ಜ್ಞಾನವಾಗುವದು. ಧರ್ಮಾಚರಣೆಯಿಂದ ಕೌಟುಂಬಿಕ ಪ್ರೇಮವು ಶುದ್ಧವಾಗುವದು. ಕುಟುಂಬ-ಘಟನೆಗೆ ಈಶ್ವರೀ ಮಾಯೆಯ ಸಹಾಯವು ಕೆಲಮಟ್ಟಿಗೆ ಕಡಿಮೆಯಾಗುವವರಿಂದ, ಕುಟುಂಬದ ಹಿತಕ್ಕಾಗಿ ಕುಟುಂಬದೊಳಗಿನ ಜನರು ಪ್ರಯತ್ನಪೂರ್ವಕ ಸ್ವಾರ್ಥತ್ಯಾಗವನ್ನು ಮಾಡಲಿಕ್ಕೆ ಕಲಿಯಲು ಆರಂಭಿಸಬೇಕಾಗುವದು; ಆದ್ದರಿಂದ ಕುಟುಂಬಕ್ಕೆ ಶಿಕ್ಷಣಸರ್ವಸ್ವವೆಂಬ ಹೆಸರನ್ನು ಕೊಟ್ಟಿರುತ್ತದೆ. ಈ ಕೌಟುಂಬಿಕ ಪ್ರೇಮ-ವಿಭಜನವನ್ನು ಸಂತತಿಯಮಟ್ಟಿಗೆ ಕೆಲಕಾಲ ಮನುಷ್ಯೇತರ ಪ್ರಾಣಿಗಳಲ್ಲಿಯೂ ಕಾಣಬಹುದು. ದಾಂಪತ್ಯಪ್ರೇಮವೆಂಬ ಸಂಸಾರ ವೃಕ್ಷದ ತಾಯಿ ಬೇರಿಗೆ, ಕುಟುಂಬದೊಳಗಿನ ಉಳಿದ ಜನರ ಪ್ರೇಮ ಸಂಗಮವು ಉಪಬೇರುಗಳಂತೆ ಇರುತ್ತದೆ; ಆದ್ದರಿಂದ ಕುಟುಂಬಕ್ಕೆ ಉಪಬೇರುಗಳು ಮುಖ್ಯವಾಗಿರುವ ಸಂಸಾರ ವೃಕ್ಷವೆಂದು ಕರೆಯಬಹುದು.



## ೫ ಸಮಾಜ
### ಅಥವಾ
## ಕರ್ತವ್ಯ-ಸರ್ವಸ್ವ

ಇದರಲ್ಲಿ ಸಮಾಜ ಘಟನೆಯಸ್ವರೂಪವನ್ನು ಹೇಳಿ, ಸಮಾಜದವರು ತಮ್ಮ ಪ್ರೇಮವನ್ನು ಪರಸ್ಪರರಲ್ಲಿ ಹಂಚಿ ಸಮಾಜವು ಏಕಜೀವವಾಗುವಕ್ರಮವನ್ನು ಹೇಳುವಾಗ ಮೇಲಿನ ಉಪೋದ್ಘಾತದಲ್ಲಿಯ ಹನ್ನೆರಡು ಭಾಗಗಳಲ್ಲಿಯ ವಿಷಯಗಳನ್ನು ವಿವರಿಸಬೇಕಾಗಿರುವದು. ಈ ಸಾಮಾಜಿಕವಿಭಜನಕ್ಕೆ ಈಶ್ವರೀ ಮಾಯೆಯ ಸಹಾಯದ ಕಸುವು ಮತ್ತಿಷ್ಟು ಕಡಿಮೆಯಾಗುವದು.

ಅವಮಾನದಿಂದ ಸಮಾಜದವರು ಸತ್ಸಂಗ-ಧರ್ಮಶ್ರದ್ಧೆಗಳಲ್ಲಿ ಹೆಚ್ಚು ಆಸಕ್ತಿಯನ್ನು ತಾಳಬೇಕು. ಸತ್ಸಂಗದಿಂದ ಸಾಮಾಜಿಕಧರ್ಮದ ಜ್ಞಾನವಾಗುವದು, ಧರ್ಮಾಚರಣೆಯಿಂದ ಸಾಮಾಜಿಕ ಪ್ರೇಮವು ಶುದ್ಧವಾಗುವದು. ಸಾಮಾಜಿಕಸುಖದ ವೃದ್ಧಿಯಾದ ಹೊರತು ಕೌಟುಂಬಿಕಸುಖವು ಶಾಶ್ವತವೂ, ಸಫಲವೂ ಆಗದೆಂದು ತಿಳಿದು, ಬಹುಮಟ್ಟಿಗೆ ಶಿಥಿಲವಾಗಿರುವ ಈಶ್ವರೀ ಮಾಯೆಯ ಸಹಾಯದಿಂದ ಸಮಾಜದವರು ರಕ್ತಸಂಬಂಧಿಕರಲ್ಲದವರ ಹಿತಕ್ಕಾಗಿ ಧಾರ್ಮಿಕಭಾವವನ್ನು ಬಲಪಡಿಸಿ ಪ್ರಯತ್ನಪೂರ್ವಕ ಸ್ವಾರ್ಥತ್ಯಾಗಮಾಡುವದು ತಮ್ಮ ಕರ್ತವ್ಯವೆಂದು ತಿಳಿಯಬೇಕಾಗುವದು! ಆದ್ದರಿಂದ ಸಮಾಜಕ್ಕೆ ಕರ್ತವ್ಯ ಸರ್ವಸ್ವವೆಂಬ ಹೆಸರನ್ನು ಕೊಟ್ಟಿರುತ್ತವೆ. ಸ್ವಾರ್ಥತ್ಯಾಗದ ತಪಶ್ಚರ್ಯವು ಇಲ್ಲಿಂದಲೇ ಒಡೆದು ಕಾಣತೊಡಗುವದು. ಈ ತಪಶ್ಚರ್ಯದಿಂದಲೇ ಮನುಷ್ಯಪ್ರಾಣಿಯು ಸಮಾಜಘಟಿತವಾದದ್ದೆಂದು ಸಿದ್ಧವಾಗಿ, ಅದು ಪಾಶವೀಸ್ಥಿತಿಯಿಂದಉತ್ಕ್ರಾಂತಿಯನ್ನು ಹೊಂದಿದ್ದೆಂದು ಸ್ಪಷ್ಟವಾಗಿ ತೋರುವದು. ಜಿಗರೆಮುಂತಾದ ಕೆಲವು ಮನುಷ್ಯೇತರ ಪ್ರಾಣಿಗಳಲ್ಲಿ ಸಮಾಜಘಟನೆಯ ಸ್ವರೂಪವು ಕಂಡುಬರುತ್ತಿದ್ದರೂ, ಅದು ಆಯಾ ಪ್ರಾಣಿಗಳ ಹುಟ್ಟುಗುಣದಿಂದ ಆದದ್ದಲ್ಲದೆ, ತಪಶ್ಚರ್ಯದಿಂದ ಆದದ್ದಲ್ಲ. ಸಂಸಾರವೃಕ್ಷಕ್ಕೆ ಸಮಾಜದ ವ್ಯಕ್ತಿಗಳು ಟೊಂಗೆಗಳಂತೆ ಇರುವದರಿಂದ, ಸಮಾಜವನ್ನು ಟೊಂಗೆಗಳು ಮುಖ್ಯವಾಗಿರುವ ಸಂಸಾರ ವೃಕ್ಷವೆಂದು ಕರೆಯಬಹುದು.



## ೬ ರಾಷ್ಟ್ರ

### ಅಥವಾ

## ಸುಖಸರ್ವಸ್ವ

ಹಲವು ದಂಪತಿಗಳು ಕೂಡಿ ಕುಟುಂಬವು, ಹಲವು ಕುಟುಂಬಗಳು ಕೂಡಿ ಸಮಾಜವು ಆಗುವಂತೆ, ಹಲವು ಸಮಾಜಗಳು ಕೂಡಿ ರಾಷ್ಟ್ರವಾಗುವದು. ಇದರಲ್ಲಿ ರಾಷ್ಟ್ರಘಟನೆಯ ಸ್ವರೂಪವನ್ನು ಹೇಳಿ, ರಾಷ್ಟ್ರದವರು

ತಮ್ಮ ಪ್ರೇಮವನ್ನು ಪರಸ್ಪರರಲ್ಲಿ ಹಂಚಿ ರಾಷ್ಟ್ರವು ಏಕಜೀವವಾಗುವ ಕ್ರಮವನ್ನು ಹೇಳುವಾಗ ಮೇಲಿನ ಉಪೋದ್ಘಾತದಲ್ಲಿಯು ಹನ್ನೆರಡು ಭಾಗಗಳಲ್ಲಿಯು ವಿಷಯಗಳನ್ನು ವಿವರಿಸಬೇಕಾಗಿರುವದು. ಈ ರಾಷ್ಟ್ರೀಯ ಪ್ರೇಮ ವಿಭಜನೆಗೆ ಈಶ್ವರೀಮಾಯೆಯ ಸಹಾಯವು ದೊರೆಯುವದಿಲ್ಲವೆಂತಲೇ ಹೇಳಬಹುದು! ಅಲ್ಲದೆ ಭಿನ್ನ ಭಿನ್ನ ಧರ್ಮದ ಸಮಾಜಗಳ ಐಕ್ಯವು ರಾಷ್ಟ್ರದಲ್ಲಿ ಆಗಬೇಕಾಗುವದು! ಆದ್ದರಿಂದ ರಾಷ್ಟ್ರೀಯಪ್ರೇಮದ ಐಕ್ಯಕ್ಕೆ, ತಾವೆಲ್ಲರೂ ಒಬ್ಬ ಭೂಮಾತೆಯಿಂದ ಹುಟ್ಟಿ ಬೆಳೆದು ಜೀವಿಸುವವರೆಂಬ ದೃಢವಾದ ಅಭಿಮಾನವನ್ನು ತಾಳಬೇಕಾಗುವದು. ಇಂತಹ ಅಭಿಮಾನವನ್ನು ದೃಢಪಡಿಸಲಿಕ್ಕೂ, ರಾಷ್ಟ್ರೀಯಧರ್ಮವನ್ನು ತಿಳಿಸಲಿಕ್ಕೂ ಸಮರ್ಥರಾದ ರಾಷ್ಟ್ರೀಯ ಗುರುಗಳು ಬೇಕಾಗುವರು. ಈಶ್ವರೀತಂತ್ರದ ಸಹಾಯವುಳ್ಳ ಘಟನೆಯು ಸಮಾಜಕ್ಕೆ ಮುಗಿಯಿತು. ಸಮಾಜ ಘಟನೆಯವರೆಗೆ ಈಶ್ವರೀಮಾಯೆಯು ಉತ್ತರೋತ್ತರ ಕ್ಷೀಣವಾಗುತ್ತ ಬರುತ್ತದೆ. ರಾಷ್ಟ್ರಘಟನೆಯು ಕೇವಲ ಮನುಷ್ಯನ ತಪಸ್ಸಿನ, ಅಂದರೆ ಸ್ವಾರ್ಥತ್ಯಾಗದ ಫಲವಾಗಿರುವದು. ಮನುಷ್ಯಪ್ರಾಣಿಯ ಸುಖದ ಕಸುವೂ, ಸ್ಥೈರ್ಯವೂ ರಾಷ್ಟ್ರಘಟನೆಯಿಲ್ಲದೆ ಉಂಟಾಗದಿರುವದರಿಂದ, ರಾಷ್ಟ್ರವನ್ನು ಸುಖಸರ್ವಸ್ವವೆಂದು ಕರೆಯಬೇಕಾಯಿತು. ದಾಂಪತ್ಯ ಸುಖಕ್ಕಿಂತ ಕೌಟುಂಬಿಕ ಸುಖವು, ಕೌಟುಂಬಿಕ ಸುಖಕ್ಕಿಂತ ಸಾಮಾಜಿಕ ಸುಖವು, ಸಾಮಾಜಿಕ ಸುಖಕ್ಕಿಂತ ರಾಷ್ಟ್ರೀಯ ಸುಖವು ಉತ್ತರೋತ್ತರ ನಿರ್ಭಯವೂ, ಪ್ರಗತಿಶೀಲವೂ. ಸ್ಥಿರವೂ ಆಗಿರುವವು. ಜಗತ್ತಿನ ಜೀವನಾರ್ಥ ಕಲಹದಲ್ಲಿ ಸಬಲರು ಉಳಿದು ದುರ್ಬಲರ ನಾಶವಾಗುವದು. ಬಿಡಿದಂಪತಿಗಳಿಗಿಂತ ಕುಟುಂಬವು, ಬಿಡಿಕುಟುಂಬಗಳಿಗಿಂತ ಸಮಾಜವು, ಬಿಡಿಸಮಾಜಗಳಿಗಿಂತ ರಾಷ್ಟ್ರವು ಸಬಲ! ರಾಷ್ಟ್ರೀಯಬಲವು ಕುಟುಂಬ-ಸಮಾಜಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು ರಕ್ಷಿಸುವದು. ಇಂತಹ ರಾಷ್ಟ್ರೀಯ ಪವಿತ್ರಪ್ರೇಮವು ಪ್ರತಿಒಬ್ಬ ವ್ಯಕ್ತಿಯಲ್ಲಿ ಉತ್ಪನ್ನವಾಗಬೇಕಾದರೆ, ಆ ವ್ಯಕ್ತಿಯು ರಾಷ್ಟ್ರೀಯ ಧರ್ಮವನ್ನು ಆಶ್ರಯಿಸಬೇಕು. ರಾಷ್ಟ್ರೀಯ ಘಟನೆಯು ಬಲಿಷ್ಠವಾಗಬೇಕಾದರೆ ಆ ರಾಷ್ಟ್ರದ ಘಟಕಗಳಾದ ಸಮಾಜ, ಕುಟುಂಬ, ದಂಪತಿಗಳು ಇವು

ತಮ್ಮತಮ್ಮಲ್ಲಿ ಏಕೀಭವಿಸಿ ಬಲಿಷ್ಠವಾಗಿರಬೇಕಾಗುವದು. ಇಂತಹ ಸುವ್ಯವಸ್ಥೆಯು ಉಂಟಾಗಬೇಕಾದರೆ ರಾಷ್ಟ್ರವು ಧರ್ಮಮಯವಾಗಿರಬೇಕು. ಅದಕ್ಕೆ ಸತ್ಸಹವಾಸವು ಲಭಿಸಿರಬೇಕಾಗುವದು. ರಾಷ್ಟ್ರದಲ್ಲಿ ಆಸುರೀ ಭಾವವು ಕುಗ್ಗಿ ದೈವೀಭಾವವು ಪ್ರಬಲವಾಗಿರಬೇಕಾಗುವದು. ರಾಷ್ಟ್ರವು ಪಲ್ಲವ, ಪುಷ್ಪ, ಫಲಯುಕ್ತ ಪರಿಪೂರ್ಣ ಸಂಸಾರ ವೃಕ್ಷವಾಗಿರುವದು. ಈ ವೃಕ್ಷದಲ್ಲಿಯೇ ಐಹಿಕದ ಪರಮಾವಧಿಯ ಸುಖವನ್ನು ಅನುಭವಿಸಬಹುದು. ಈ ಕೌತುಕದ ತಪೋಮಯವಾದ ರಾಷ್ಟ್ರೀಯ ಘಟನೆಯು ಕರ್ತವ್ಯನಿಷ್ಠ ಮನುಷ್ಯ ಯೋನಿಯಲ್ಲಲ್ಲದೆ, ನೀಚ ಭೋಗ್ಯ ಯೋನಿಗಳೆನಿಸುವ ತಿರ್ಯಗ್ ಪ್ರಾಣಿಗಳಲ್ಲಂತು ಇರಲಿ, ಉಚ್ಚಭೋಗ್ಯ ಯೋನಿಗಳೆನಿಸುವ ದೇವತೆಗಳಿಗೂ ಲಭಿಸಲಾರದೆಂದು ಹೇಳಬೇಕಾಗುವದು.



## ವಿಶ್ವ
### ಅಥವಾ
## ಆನಂದ ಸರ್ವಸ್ವ!

ಸಾಮಾನ್ಯ ಹಿತದ ಎರಡು ವ್ಯಕ್ತಿಗಳು ಏಕಜೀವವಾಗಲು, ದಾಂಪತ್ಯವು ಉಂಟಾಗುವದು. ಸಾಮಾನ್ಯ ಹಿತದ ಹಲವು ದಂಪತಿಗಳು ಏಕಜೀವವಾಗಲು, ಕುಟುಂಬವಾಗುವದು. ಸಾಮಾನ್ಯ ಹಿತದ ಹಲವು ಕುಟುಂಬಗಳು ಏಕಜೀವವಾಗಲು, ಸಮಾಜವಾಗುವದು. ಅದರಂತೆ ಸಾಮಾನ್ಯ ಹಿತದ ಹಲವು ಸಮಾಜಗಳು ಒಟ್ಟುಗೂಡಲು ರಾಷ್ಟ್ರವಾಗುವದು; ಆದರೆ ಇದರಂತೆ ಸಾಮಾನ್ಯ ಹಿತದ ಹಲವು ರಾಷ್ಟ್ರಗಳು ಒಟ್ಟುಗೂಡಿದರೆ ವಿಶ್ವವು ಮಾತ್ರ ಆಗಲಾರದು; ಯಾಕಂದರೆ ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ ಕೃತ್ರಿಮ ಘಟನೆಗೆ ಒಳಗಾಗದ ಪ್ರಾಣಿಕೋಟಿಗಳೂ, ಉದ್ಭಿಜ್ಜ ಕೋಟಿಗಳೂ, ಜಡಕೋಟಿಗಳೂ ವಿಶ್ವದಲ್ಲಿ ಬರುವವಲ್ಲದೆ, ನಮ್ಮ ಈ ಭೂಲೋಕದಿಂದ ಭಿನ್ನವಾದ ಅನಂತ ಲೋಕಗಳ ಸಮಾವೇಶವೂ ವಿಶ್ವದಲ್ಲಿ ಆಗು

ವದು; ಆದ್ದರಿಂದ ವಿಶ್ವದ ಘಟನಾ-ಸಾಮರ್ಥ್ಯವು ವಿಶ್ವದ ಸಮಾನ
ಧರ್ಮದ ಪರಿಜ್ಞಾನವುಳ್ಳ ಒಬ್ಬ ಪರಮಾತ್ಮನಲ್ಲಿರುವದಲ್ಲದೆ ಕ್ಷುದ್ರ
ಮಾನವಪ್ರಾಣಿಯಲ್ಲಿ ಇರಲಾರದು. ಸಂಘಟನೆಯು ಮಾನವೀ ಕೃತ್ರಿಮ
ಸೃಷ್ಟಿಯು ರಾಷ್ಟ್ರಘಟನೆಗೆ ಮುಗಿಯಿತೆಂದು ಹೇಳಬಹುದು. ಸುಖಕ್ಕೆ
ದುಃಖದ ಅಪೇಕ್ಷೆಯಿರುವಂತೆ, ಆನಂದಕ್ಕೆ ಮತ್ತೊಂದರ ಅಪೇಕ್ಷೆ ಇರಲಾ
ರದು. ಅಂದಬಳಿಕ ವಿಶ್ವದ ವಿಷಯವಾಗಿ ಪರಕೀಯ ಭಾವದ ಅನುಭ
ವವು ಲೇಶವಾದರೂ ತನಗೆ ಬಾರದಂತೆ, ಅರ್ಥಾತ್ ಪರಕೀಯತ್ವದ ಅಭಾ
ವವಾಗುವಂತೆ ತಾನು ತನ್ನ ಪ್ರೇಮವನ್ನಷ್ಟೇ ಅಲ್ಲ, ತನ್ನನ್ನೇ ವಿಶ್ವದಲ್ಲಿ
ಹಂಚಿಕೊಂಡಲ್ಲದೆ, ಅಂದರೆ ಎಲ್ಲವೂ ನಾನೇ ಎಂದಾಗಲಿ, ಎಲ್ಲವೂ ದೇವರೇ
ಎಂದಾಗಲಿ, ಎಲ್ಲವೂ ದೇವರದೇ ಎಂದಾಗಲಿ ಅನುಭವಪಡೆದ ಹೊರತು
ಆನಂದವು ಉಂಟಾಗಲಾರದು.

ಹೀಗಾಗಬೇಕಾದರೆ ರಾಷ್ಟ್ರೀಯ ಭಾವದಿಂದ ಮನುಷ್ಯತ್ವವನ್ನು
ಪಡೆದವನು, ಆನಂದಪ್ರಾಪ್ತಿಗಾಗಿ ಆತುರಪಟ್ಟು ಸಾಧನಚತುಷ್ಟಯ ಸಂಪ
ನ್ನನಾಗಬೇಕಾಗುವದು. ದಾಂಪತ್ಯ, ಕುಟುಂಬ, ಸಮಾಜ ಇವುಗಳ ಸ್ಥಿತಿ
ಯನ್ನು ಸಾರ್ಥಕಮಾಡಿಕೊಂಡ ಮನುಷ್ಯನು ಪಶುಕೋಟಿಯನ್ನು ಮೀರಿ
ಬಹುದೂರ ಹೋದನೆಂದು ಹೇಳಲಾಗುವದಿಲ್ಲ; ಯಾಕಂದರೆ ಪಶುಗಳಲ್ಲಿಯೂ
ಈ ಮೂರು ಸ್ಥಿತಿಗಳು ಒಂದಿಲ್ಲೊಂದು ಬಗೆಯಿಂದ ಕಂಡುಬರುವವು;
ಆದ್ದರಿಂದ ಪಶುಕೋಟಿಯನ್ನು ಮೀರಿದ ರಾಷ್ಟ್ರೀಯ ಭಾವನೆಯಲ್ಲಿಮಾತ್ರ
ದೇವತ್ವವನ್ನು ಪಡೆಯಲು ಮನುಷ್ಯನಿಗೆ ಅವಕಾಶವಿರುತ್ತದೆ. ದಾಂಪತ್ಯ-
ಕೌಟುಂಬಿಕ ಸ್ಥಿತಿಗಳಲ್ಲಿ ಕ್ಷುದ್ರ ಸುಖಕ್ಕಾಗಿ ಕೃಪಣನಾಗಿದ್ದ ಮನುಷ್ಯನು,
ಸಾಮಾಜಿಕ-ರಾಷ್ಟ್ರೀಯ ಸ್ಥಿತಿಗಳಲ್ಲಿಯ ಉತ್ತರೋತ್ತರದ ಉದಾತ್ತ ಸುಖ
ಗಳಿಗಾಗಿ ಉದಾರನಾಗುತ್ತ ಹೋಗಬೇಕಾಗುವದು. ಇಂತಹ ಉದಾರ
ಮನುಷ್ಯನೇ ಪರಮಾನಂದ ಪ್ರಾಪ್ತಿಗಾಗಿ ವಿಶ್ವಸ್ಥಿತಿಯಲ್ಲಿ ಮುಮುಕ್ಷುವಾಗಿ
ಮಹಾಪುರುಷ ಸಂಗದಿಂದ ನಿಸ್ಪೃಹನಾಗಬಹುದು; ಅಂದರೆ ಕೃಪಣನಿದ್ದ
ವನು ಉದಾರನಾಗುತ್ತ ಕಡೆಗೆ ನಿಸ್ಪೃಹನಾಗಬೇಕೆಂಬದು ತಾತ್ಪರ್ಯವು!
ನಿರಿಚ್ಛೆಯೇ ಆನಂದದ ಮೂಲವೆಂಬದನ್ನು ಆತನು ಅರಿತುಕೊಳ್ಳಬೇಕಾ

ಗುವದು. ಈ ನಿರಿಚ್ಛ ಸ್ಥಿತಿಯನ್ನೇ ಮೋಕ್ಷವೆಂದು ಕರೆಯಬಹುದು. ಇದರ ಮೇಲಿಂದ ಸುಖದ ಹಂಬಲವನ್ನು ಬಿಡುತ್ತ ಹೋದಂತೆ ಮನುಷ್ಯನ ದುಃಖದ ವೇಗವು ಕಡಿಮೆಯಾಗುತ್ತಾಗುತ್ತ ಕಡೆಗೆ ಆತನ ಸುಖ - ದುಃಖ ಗಳ ಕಲ್ಪನೆಗಳ ಅಭಾವವಾಗಲು, ಪರಮಾನಂದದ ಅನುಭವವು ಆತನಿಗೆ ಆಗಬಹುದು. ಈ ಮಹಾತ್ಮನನ್ನೇ ವಿಶ್ವಕುಟುಂಬಿಯೆಂದು ಕರೆಯಬ ಹುದು. ವಿಶ್ವರೂಪ ಕುಟುಂಬದ ಯಜಮಾನನಾದ ಪರಮಾತ್ಮನ ಗುರುತು ಮಾಡಿಕೊಳ್ಳಲಿಕ್ಕೆ ಈತನೇ ಸಮರ್ಥನಾಗಬಹುದು. ಇಂತಹವಿಶ್ವದ ಯಾಜ ಮಾನ್ಯದ ಧರ್ಮಗಳು ತಿಳಿಯಬೇಕಾದರೆ ದಾಂಪತ್ಯ,ಕುಟುಂಬ, ಸಮಾಜ, ರಾಷ್ಟ್ರಗಳ ಯಜಮಾನರು ತಮ್ಮ ತಮ್ಮ ಯಾಜಮಾನ್ಯಕ್ಕೆ ಒಳಗಾಗಿರು ವವರ ಹಿತದ ಸಲುವಾಗಿಯೂ, ಆಯಾ ಯಾಜಮಾನ್ಯಗಳಿಗೆ ಒಳಗಾಗಿರು ವವರು ಆಯಾ ಯಜಮಾನರ ಹಿತದ ಸಲುವಾಗಿಯೂ ತಮ್ಮನ್ನು ಮರೆ ಯುವ ಸಾಧನ ಮಾಡಬೇಕಾಗುವದು.

ಇಂತಹ ವಿಶ್ವ ಕುಟುಂಬಿಯ ಸಂಸಾರವೇ ಸಾರವತ್ತಾದದ್ದು. ಇಂಥ ಸಾರವತ್ತಾದ ಕೌಟುಂಬಿಕ ಸ್ಥಿತಿಯನ್ನು ಪಡೆಯಲಿಕ್ಕೆ, ಸಂಸಾರ ಸರ್ವ ಸ್ವವಾದ ದಾಂಪತ್ಯವೇ ತಾಯಬೇರಿನಂತೆ ಮೂಲಕಾರಣವಾದದ್ದರಿಂದ ನಿಜ ವಾದ ಸಂಸಾರಕ್ಕೂ, ನಿಜವಾದ ಪರಮಾರ್ಥಕ್ಕೂ ಭೇದವಿಲ್ಲೆಂದು ಜ್ಞಾನಿ ಗಳು ಹೇಳಿರುವರು. ಇಂತಹ ಸಾರ್ಥಕ ಸಂಸಾಸಾರದ ಈಶ್ವರೀ ಮಾಯೆ ಯನ್ನೇ ಮೋಕ್ಷ ಸಾಧನವೆಂದು ಹೇಳಬೇಕಾಗುವದು. ಒಟ್ಟಿಗೆ ಮೋಕ್ಷ ವನ್ನು ಪಡೆಯಲಿಚ್ಛಿಸುವವನಿಗೆ ಸಾರ್ಥಕವಾದ ದಾಂಪತ್ಯ- ಕುಟುಂಬ- ಸಮಾಜ-ರಾಷ್ಟ್ರ-ವಿಶ್ವಗಳು ಐದು ಪಾವಟಿಗೆಗಳಂತೆ ಇರುವವು. ಸಾಧನ ಚತುಷ್ಟಯ ಸಂಪನ್ನರಾದ ಎಷ್ಟೋ ಮಹಾತ್ಮರು ಸಂಸಾರದ ತೊಡಕಿನ ಪರಂಪರೆಯ ಈ ಪಾವಟಿಗೆಗಳನ್ನು ಕ್ರಮವಾಗಿ ಹತ್ತಿ ಹೋಗದೆ, ಗುರ್ವನು ಗ್ರಹದಿಂದ ತಟ್ಟನೆ ಮೋಕ್ಷವನ್ನು ಪಡೆದಿದ್ದರೂ, ಅವರು ನಮ್ಮಂತಹ ಪಾಮರರನ್ನು ಕೈಹಿಡಿದು ಕರಕೊಂಡು ಹೋಗುವಾಗ ಈ ಐದೂ ಪಾವಟಿಗೆ ಗಳನ್ನು ನಿರಾಯಾಸವಾಗಿ ಏರಿಹೋಗಿರುವವರಂತೆ ತೋರುವದು.

ಒಟ್ಟಿಗೆ, ಈಈ ಬಗೆಯ ವಿಚಾರಗಳು ನನ್ನ ಸರ್ವಸ್ವ-ಪಂಚಕದಲ್ಲಿ ಬರಬೇಕಾಗಿರುವವೆಂದು ತಿಳಿಸಿ, ಸದ್ಯಕ್ಕೆ ಸ್ಫುರಿಸಿದ ವಿಚಾರಗಳ ಟಿಪ್ಪಣಿ

ಯನ್ನು ಮುಂದೆ ಇಟ್ಟಿದ್ದೇನೆ. ಆರಂಭದ “ಸಂಸಾರ ಸರ್ವಸ್ವ” ಅಥವಾ “ದಾಂಪತ್ಯ” ಎಂಬ ವಿಷಯವನ್ನು ಸಂಪೂರ್ಣವಾಗಿ ವಿವೇಚಿಸಿದ ಹೊರತು ವಿಷಯವಿವೇಚನದ ಮಾರ್ಗವು ನಿಶ್ಚಿತವಾಗಲಾರದು.



# ೮ ಲೇಖಕರು

## ಅಥವಾ

## ಭವಿತವ್ಯತಾ-ಸರ್ವಸ್ವ !

### ಉಪೋದ್ಘಾತ

ಓದದವರೂ, ಹಾಡದವರೂ ಯಾರೆಂದು ಕೇಳುವದೊಂದು ಲೋಕ ರೀತಿಯುಂಟು ; ಆದರೆ ಈಗ ಪುಸ್ತಕ ಬರೆಯದವರೂ, ಸಭೆಗಳಲ್ಲಿ ಮಾತಾಡದವರೂ ಯಾರು [ಎಂದು ಕೇಳುವದೊಂದು ಹೊಸ ರೀತಿಯುಂಟಾಗುವಷ್ಟರ ಮಟ್ಟಿಗೆ ಲೇಖನಕಲೆ - ವ್ಯಕ್ತೃತ್ವಕಲೆಗಳು ಜನರಲ್ಲಿ ವಿಸ್ತರಿಸತೊಡಗಿರುತ್ತವೆ. ನಮ್ಮಂಥ ಅನಧಿಕಾರಿಗಳಾದ ಲೇಖಕರೂ, ವಕ್ತಾರರೂ ದುಡ್ಡಿಗಾಗಿಯೋ, ಪ್ರತಿಷ್ಠೆಗಾಗಿಯೋ ಬೈಲಿಗೆ ಬಂದು ಗದ್ದಲಮಾಡುತ್ತಿರುವಾಗ, ನಮ್ಮಗದ್ದಲದಲ್ಲಿ ಅಧಿಕಾರ ಸಂಪನ್ನ ಲೇಖಕರ, ಹಾಗು ವಕ್ತಾರರ ಸುಳವೇ ಇಲ್ಲದಹಾಗಾಗಿರುತ್ತದೆ! ಕೆಲಸಗಾರರು ಗದ್ದಲದಲ್ಲಿ ಬೈಲಿಗೆ ಬಿದ್ದರೆ ಅವರ ಕೆಲಸವೇನು ಆಗುವದು ? ಕೆಲಸವಾಗಲಿಕ್ಕೆ ಗದ್ದಲ ಗಡಿಬಿಡಿಯಿಲ್ಲದ ಶಾಂತವಾದ ವಾತಾವರಣವು ಬೇಕಲ್ಲವೆ? ಈಗಿನ ಭರತ ಭೂಮಿಯ ಯುಗವು ಕೆಲಸದ್ದಲ್ಲ, ಮಾತಿನದು-ಬರೆಯುವದು- ಗದ್ದಲಮಾಡುವದು! ಗದ್ದಲಮಾಡಿದರೆ ಎಷ್ಟೋ ಕೆಲಸ ಮಾಡಿದ ಹಾಗಾಯಿತೆಂದು ನಮ್ಮ ತಿಳವಳಿಕೆಯಾಗಿ ಹೋಗಿರುವದು. ಬೊಗಳುವ ನಾಯಿ ಕಚ್ಚುವದಿಲ್ಲ, ಕಚ್ಚುವ ನಾಯಿ ಬೊಗಳುವದಿಲ್ಲವೆಂಬಂತೆ, ಸುಮ್ಮನೆ ಉದ್ದಕ್ಕೆ ಮಾತಾಡುವವನುಕೆಲಸಮಾಡುವದಿಲ್ಲ ಕೆಲಸಮಾಡುವವನು ಸುಮ್ಮನೆ ಉದ್ದಕ್ಕೆಮಾತಾಡುವದಿಲ್ಲ. ಪಾಶ್ಚಿಮಾತ್ಯರಕೆಲಸಗಳು ನಮ್ಮಎಲ್ಲಕೆಲಸಗಳ ಗುತ್ತಿಗೆ ಹೊತ್ತು ಬಿಟ್ಟಿರಲು, ನಮಗೆ ಈಗ ಬೇರೆ ಕೆಲಸಗಳಿಲ್ಲದ್ದರಿಂದಲೇ ಕುಳಿತವರೂ-

ನಿಂತವರೂ ಇಷ್ಟೇ ಅಲ್ಲ, ಮಲಗಿದವರೂ ಲೇಖಕರಾಗತೊಡಗಿರುತ್ತೀವೆ; ಯಾಕಂದರೆ ಅವೊಂದು ನಮ್ಮ ಉಪಜೀವನ ಸಾಗಿಸುವ ಉದ್ಯೋಗಗಳಾಗಿ ಬಿಟ್ಟಿರುತ್ತವೆ. ನಮ್ಮ ಎಲ್ಲ ಮಹತ್ವದ ಕೆಲಸಗಳನ್ನು ನಾವು ಪಾಶ್ಚಿಮಾತ್ಯರಿಗೆ ಒಪ್ಪಿಸಿ ಬಿಟ್ಟಿರಲು, ಅವರ ಈ ಎರಡು ಹೊಸಬಗೆಯ ಉದ್ಯೋಗಗಳ ನಕಲಾದರೂ ನಮ್ಮ ಪಾಲಿಗೆ ಬೇಡವೆ ?

ಲೇಖಗಳಾಗಲಿ, ಬರಹಗಳಾಗಲಿ ಪ್ರತ್ಯಕ್ಷ ಕೆಲಸಗಳಂತು ಅಲ್ಲವಷ್ಟೆ? ಕೆಲಸಮಾಡಿದವರು ತಮ್ಮ ಅನುಭವವನ್ನು ಕೆಲಸಮಾಡುವವರ ಉಪಯೋಗಕ್ಕಾಗಿ ಅವರ ಮುಂದೆ ಇಡುವ ಅವೆರಡು ಸಾಧನಗಳಾಗಿರುತ್ತವೆ. ಅಂದ ಬಳಿಕ ನಮ್ಮಂತಹ ಲೇಖಕರಾಗಲಿ, ವಕ್ತಾರರಾಗಲಿ ಮೂಲತಃ ಕೆಲಸಮಾಡುವವರೇ ಅಲ್ಲದಿರಲು, ನಮಗೆ ಅನುಭವವು ಎತರದು ಬರಬೇಕು ? ಅದರಂತೆ ನಮ್ಮ ಮಾತುಗಳನ್ನು ಕೇಳುವವರು, ಅಥವಾ ನಮ್ಮ ಪುಸ್ತಕಗಳನ್ನು ಓದುವವರು ಮೂಲತಃ ಕೆಲಸದಲ್ಲಿ ತೊಡಗಿದವರಾಗಲಿ, ಕೆಲಸಮಾಡಲಿಕ್ಕೆ ಸಿದ್ಧರಾದವರಾಗಲಿ ಇಲ್ಲದಿರಲು, ಅವರು ಮಂದಿಯ ಅನುಭವವನ್ನು ತಿಳಿದುಕೊಂಡು ಮಾಡುವದೇನು ? ಒಟ್ಟಿನಲ್ಲಿ, ಲೇಖಕರ ಹಾಗು ವಕ್ತಾರರ ಈಗಿನ ಶಬ್ದಜಾಲದ ಸ್ಥಿತಿಯು ವಿಲಕ್ಷಣವಾಗಿರುತ್ತದೆ. ನಮಗೆ ಸಂಸಾರದಲ್ಲಿ ಸ್ವಲ್ಪವೂ ವಿರಕ್ತಿಯು ಉಂಟಾಗಿರದಿರಲು, ನಾವು ವೇದಾಂತವನ್ನು ಕುರಿತು ಉಪನ್ಯಾಸ ಮಾಡಲಿಕ್ಕೆ, ಅಥವಾ ಲೇಖಗಳನ್ನು ಬರೆಯಲಿಕ್ಕೆ ಹೋಗುವೆವು. ನಾವು ಬ್ರಾಹ್ಮಣರೆನಿಸಿಕೊಳ್ಳುತ್ತಿದ್ದು ಒಮ್ಮೆಯಾದರೂ ನಿತ್ಯದಲ್ಲಿ ಸಂಧ್ಯಾವಂದನವನ್ನೂ ಮಾಡದಿರಲು, ದೊಡ್ಡ ದೊಡ್ಡ ಧಾರ್ಮಿಕ ಉಪನ್ಯಾಸಗಳನ್ನು ಕೊಡುವೆವು; ಅಥವಾ ಧಾರ್ಮಿಕ ವಿಷಯಗಳ ಮೇಲೆ ಲೇಖಗಳನ್ನು ಬರೆಯುವೆವು. ನಾವು ದಿನಕ್ಕೆ ನೂರುಸಾರೆ ಸುಳ್ಳುಹೇಳುವೆವು, ದುಡ್ಡಿಗೊಮ್ಮೆ ಲಾಗಹಾಕುವೆವು, ಯುಕ್ತಿಪ್ರಯುಕ್ತಿಯಿಂದ ಮಂದಿಯನ್ನು ಮೋಸಗೊಳಿಸುವೆವು; ಆದರೆ ಸತ್ಯ, ನಿಸ್ಪೃಹತೆ, ಸರಳತನಗಳ ಉಹಾಪೋಹವನ್ನು ಬಹು ಸೂಕ್ಷ್ಮವಾಗಿ ಮಾತಿನಿಂದಾಗಲಿ, ಬರಹದಿಂದಾಗಲಿ ಮಾಡುವೆವು. ಇದು ನಾಚಿಕೆ ಬರುವ ಮಾತಲ್ಲವೆ ? ತಮಗೆ ಅನುಭವವಿಲ್ಲದ ವಿಷಯಗಳ ಮೇಲೆ ಮಾತಾಡಲಿಕ್ಕೆ, ಅಥವಾ ಬರೆಯಲಿಕ್ಕೆ ಹೋಗುವ

ದೆಂದರೆ, ವೇಷಧಾರಿಗಳ ಕೆಲಸವಲ್ಲದೆ ಮತ್ತೇನು? ಇಂತಹ ಅನುಭವಶೂನ್ಯ ವಕ್ತಾರರ ಹಾಗು ಲೇಖಕರ ವಿಪುಲತೆಯಿಂದ ಈಗ ಆಗುತ್ತಿರುವ ಲೋಕದ ಹಾನಿಯು ಸಣ್ಣ ಪುಟ್ಟದಲ್ಲ.

ಅನಧಿಕಾರಿಗಳ, ಅಂದರೆ ಅನುಭವ ಜ್ಞಾನವಿಲ್ಲದವರ ಪ್ರವಚನದ ವಿಪರೀತ ಪರಿಣಾಮವಾಗುವದರ ಒಂದು ಉದಾಹರಣವನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳುವೆನು. ಮೊನ್ನೆ ಒಂದು ದೇವಸ್ಥಾನದಲ್ಲಿ ಗೀತೆಯ ಪ್ರವಚನವು ನಡೆದಿತ್ತು. ಶಾಸ್ತ್ರಿಗಳು ಒಳ್ಳೇ ತೇಜಃಪುಂಜರು, ಗಾನಕುಶಲರು, ವಿದ್ವಾಂಸರು, ಉತ್ತಮವಕ್ತಾರರು! ಇಂಥವರ ಪ್ರವಚನವನ್ನು ಕೇಳಲಿಕ್ಕೆ ಶ್ರೋತೃವೃಂದವೂ ಸ್ಥಳಸಾಲದಂತೆ ಕುಳಿತುಕೊಂಡಿತ್ತು! ಆದರೆ ಪ್ರವಚನವು ನಡೆದಾಗ ಗಾಯನದ ಗಿರಡಿಗಳಮೇಲೆ ಗಿರಡಿಗಳು ಹೊರಡುವದನ್ನೂ, ವಕ್ತೃಗಳು ಹಾಗು ಶ್ರೋತೃಗಳು ನಡನಡುವೆ ನಗುವದನ್ನೂ, ಶ್ರೋತೃಗಳ ಚಪ್ಪಳೆಗಳಿಂದ ಮಂದಿರವು ಪ್ರತಿಧ್ವನಿತವಾಗುವದನ್ನೂ, ವಕ್ತಾರರು ನಡನಡುವೆ ತಮ್ಮ ಕಂಠವು ಸರಳವಾಗುವದಕ್ಕಾಗಿ ಬಾಯಲ್ಲಿ ಏನನ್ನೋ ಸಂಕೋಚವಿಲ್ಲದೆ ಹಾಕಿಕೊಳ್ಳುವದನ್ನೂ ನೋಡಿದರೆ, ಶ್ರೀಕೃಷ್ಣಪರಮಾತ್ಮನು ಯುದ್ಧದಂತಹ ಪ್ರಾಣಘಾತಕ ಪ್ರಸಂಗವು ಎದೆಯಮೇಲೆ ಕುಳಿತಿರಲು, ಶೋಕಾಕುಲನಾದ ಅರ್ಜುನನಿಗೆ ಇದೇಚಂದದಿಂದ ಗೀತೆಯನ್ನು ಉಪದೇಶಿಸಿರಬಹುದೇ? ಎಂಬ ವಿಚಾರವು ಮನಸ್ಸಿನಲ್ಲಿ ಬಂದು ವಿಷಾದವಾಯಿತು! ಕೇವಲ ತಪಸ್ವಿಗಳ ವಿಷಯವಾದ ಭಗವದ್ಗೀತೆಯಂತಹ ಗಹನವಿಷಯದ ಪ್ರವಚನವೂ ಒಂದು ಮನೋರಂಜಕ ವಿಷಯವಾಗಿ ಪರಿಣಮಿಸಿದ ಬಳಿಕ ಪ್ರವಚನಗಳ ಇದಕ್ಕೂ ಹೆಚ್ಚಿನ ವಿಪರೀತ ಪರಿಣಾಮವನ್ನು ಏನು ತೋರಿಸಬೇಕು? ಇಂತಹ ವಿಸಂಗತ ಪ್ರವಚನ ಪದ್ಧತಿಗಳು ಬಳಿಕೆಯಲ್ಲಿ ಬಂದುದರಿಂದಲೇ ವೈದಿಕಧರ್ಮದ ಗತಿಯು ಈ ಸ್ಥಿತಿಗೆ ಬಂದು ಮುಟ್ಟಿದೆ!

ಇದು, ಧರ್ಮನಿರತರೆನಿಸಿಕೊಳ್ಳುವ ಕರ್ಮಶೀಲ ಶಾಸ್ತ್ರಿಗಳ ಆಧ್ಯಾತ್ಮಿಕ ಪ್ರವಚನದ ದುಷ್ಪರಿಣಾಮದ ಒಂದು ಉದಾಹರಣವಾಯಿತು. ಇನ್ನು ಈಗಿನ ದೇಶಭಕ್ತರ ಸಾಮಾಜಿಕ-ರಾಜಕೀಯ ವ್ಯಾಖ್ಯಾನಗಳ ಪರಿಣಾಮದ ಪಡಿಕಟ್ಟನ್ನು ನೋಡೋಣ. ಈಗ ದೇಶದಲ್ಲಿ ಎಲ್ಲಿನೋಡಿದರೂ

ದೇಶಭಕ್ತರ ವಿಚಾರಗಳಿಗೆ ಗೌರವವಿರುವದಷ್ಟೆ? ಹಾಗೆ ಗೌರವವಿರುವದು ಅವಶ್ಯವೂ ಇರುವದು. ದೇಶೋದ್ಧಾರಕ್ಕಾಗಿ ಜನರಲ್ಲಿ ಒಕ್ಕಟ್ಟು ಉಂಟಾಗುವದು ಅವಶ್ಯವೆಂದು ತಿಳಿದು ಅವರು ತಮ್ಮ ತಿಳವಳಿಕೆಯಂತೆ ಹಿತಬುದ್ಧಿಯಿಂದ ಸಭೆ-ಸಭೆಗಳಲ್ಲಿ ವ್ಯಾಖ್ಯಾನಗಳನ್ನು ಕೊಡುವರು; ವಿವಿಧಪುಸ್ತಕಗಳನ್ನು ಬರೆದು ಪ್ರಸಿದ್ಧಮಾಡುವರು; ಅವರ ಈ ಪ್ರಯತ್ನಗಳು ಸತತವಾಗಿ ನಡೆದಿದ್ದರೂ ಪರಿಣಾಮವು ಮಾತ್ರ ಅವರ ಉದ್ದೇಶಕ್ಕೆ ವಿರುದ್ಧವಾಗಿ ಆಗುತ್ತಿರುವದು. ಯಾವ ಕಾರಣದಿಂದಲೋ ನಮ್ಮಲ್ಲಿ ಸ್ವಕೀಯರ ವಿಷಯವಾಗಿ ಪರಸ್ಪರ ಅಶ್ರದ್ಧೆಯು ಉಂಟಾಗುತ್ತ ಪರಸ್ಪರರಲ್ಲಿ ದ್ವೇಷಭಾವವು ಬೆಳೆಯುತ್ತ ನಡೆದಿರುವದು. ಹೀಗೆ ಏಕಾಗಬೇಕು ? ಲೇಖಕರ ಅಥವಾ ವಕ್ತಾರರ ಅಪಕ್ವವಿಚಾರದ ವಿಕಾರವಶತೆಯೇ ಇದಕ್ಕೆ ಕಾರಣವಿರಬಹುದೇನು? ಎಲ್ಲ ದೇಶಭಕ್ತರು ದೇಶದ ಹಿತವಾಗಬೇಕೆಂದು ಬಯಸುತ್ತಿರಬಹುದು! ಆದರೆ ಕೇವಲ ಬಯಸಿದ ಮಾತ್ರದಿಂದ ಬಯಕೆಯು ಪೂರ್ಣವಾಗುವದಿಲ್ಲವೆಂಬವನ್ನು ಇದೇ ಪುಸ್ತಕದ ಹಿಂದಿನ ಸರ್ವಸ್ವಪಂಚಕ ಎಂಬ ವಿಷಯದ ಉಪೋದ್ಘಾತದ ಲೇಖದಲ್ಲಿ ಹೇಳಿರುತ್ತದೆ. ವೈದಿಕರಾದ ನಮಗೆ ಪ್ರತ್ಯಕ್ಷ ಈಶ್ವರವಾಣಿಯೆನಿಸುವವೇದವೂ, ವೇದತುಲ್ಯವಾದ ಮಹಾಭಾರತದಂಥ ಪೂಜ್ಯ ಗ್ರಂಥಗಳೂ, ಮನ್ವಾದಿ ಮಹರ್ಷಿಗಳ ಸನಾತನತತ್ವದಸ್ಮೃತಿಗಳೂ,ಲೋಕಕಲ್ಯಾಣಕಾರಕಗಳಾದ ಪುರಾಣಗಳೂ ಅನಾದರಣೀಯವಾಗಲಿಕ್ಕೆ ನಮ್ಮ ಅಪಕ್ವ ವಿಚಾರವಲ್ಲದೆ ಮತ್ತೇನು? ಈ ಅಲೌಕಿಕ ಗ್ರಂಥಗಳು ಸಹಸ್ರಾವಧಿ ವರ್ಷಗಳಿಂದ ನಮ್ಮ ಹಿಂದೂ ಜನರ ಹೃದಯಗಳ ಐಕ್ಯಮಾಡುತ್ತ ಬಂದಿರಲು, ಅವೇ ಗ್ರಂಥಗಳು ಈಗ ಹಿಂದೂ ಜನರ ಪರಸ್ಪರ ವೈಷಮ್ಯಕ್ಕೆ ಕಾರಣವಾಗಿರುತ್ತವಲ್ಲ ! ಹೀಗೆ ಧರ್ಮಗ್ರಂಥಗಳ ಮೇಲಿನ ನಮ್ಮ ಶ್ರದ್ಧೆಯು ಕಡಿಮೆಯಾಯಿತು. ನಮ್ಮಲ್ಲಿಯ ಅವತಾರಿಕರು ನಮ್ಮ ವಿಚಾರದಿಂದ ಮನುಷ್ಯಕೋಟಿಯಲ್ಲಿ ಸೇರಿಬಿಟ್ಟರು. ಅಂದಬಳಿಕ ಯಾವ ಪ್ರಬಲಾಧಾರದಿಂದ ನಾವೆಲ್ಲರೂ ಏಕೀಭವಿಸಬೇಕು? ಇಂತಹ ನಾಸ್ತಿಕತೆಯ ಚಂದದ ನಮ್ಮ ಪ್ರಯತ್ನದಿಂದ ಭಾರತ ಭೂಮಾತೆಯ ಹಸುಮಕ್ಕಳ ಸರ್ವಾಧಾರವಾದ ಶ್ರದ್ಧಾ-ಭಕ್ತಿ-ಪ್ರೇಮಗಳ ಮೊಳಿಕೆಗಳೇ ಕಮರಿ

ಹೋಗುವದರಿಂದ, ಅವರು ಸೂತ್ರಹರಿದ ಮಣಿಗಳಂತೆ ಎತ್ತೆತ್ತೋ ಸಿಡಿದು ಹೋಗುತ್ತಲಿದ್ದರೆ ಆಶ್ಚರ್ಯವೇನು? ದೇಶದ ಹಿತವನ್ನು ನಿಜವಾಗಿಯೇ ಬಯಸುವ ಲೇಖಕರೂ, ವಕ್ತಾರರೂ ಈ ಮಾತಿನ ವಿಚಾರವನ್ನು ಅವಶ್ಯವಾಗಿ ಮಾಡಬೇಕು. ಭಾರತ ಭೂಮಾತೆಯ ಜೀವವು ಧರ್ಮವೆಂಬದನ್ನು ಮರೆಯಬಾರದು. ಈ ಮಾತನ್ನು ದುರ್ಲಕ್ಷಿಸಿದಂತೆ ನಮ್ಮಲ್ಲಿ ದ್ವೇಷಾಸೂಯಾದಿ ವಿಕಾರಗಳು ಹೆಚ್ಚುತ್ತ ಅಂತಃ ಕಲಹಗಳೂ, ರಾಜಕೀಯ ಮತ ಭೇದಗಳೂ ಬೆಳೆದು ದೇಶೋದ್ಧಾರದ ಆಶೆಯು ಕಡಿಮೆಯಾಗುತ್ತ ಹೋಗಿ, ಅದರ ಅಪಕೀರ್ತಿಗೆ ಬಹ್ವಂಶದಿಂದ ಈಗಿನ ಲೇಖಕರೂ, ವಕ್ತಾರರೂ ಗುರಿಯಾಗುವಲ್ಲಿ ಸಂಶಯವಿಲ್ಲ.

ಇಷ್ಟೆಲ್ಲ ಅನರ್ಥವು ಉಂಟಾಗಲಿಕ್ಕೆ ನಮ್ಮಂತಹ ಅನಧಿಕಾರಿಗಳಾದ, ಅಂದರೆ ಅನುಭವ ಜ್ಞಾನವಿಲ್ಲದ ಲೇಖಕರೂ, ವಕ್ತಾರರೂ ಹಿಂದುಮುಂದಿನ ವಿಚಾರವಿಲ್ಲದೆ ಮುಗಿಬಿದ್ದು ಕಾರ್ಯಮಾಡುತ್ತಿರುವದೇ ಕಾರಣವು! "ನಾವು ಮಹಾ ವಕ್ತಾರರು, ಉತ್ತಮ ಲೇಖಕರು, ಅಚ್ಚ ದೇಶೋದ್ಧಾರಕರು, ಅಪೂರ್ವ ಹೊಸಮಾರ್ಗ ಶೋಧಕರು" ಎಂಬಿವೇ ಮೊದಲಾದ ಅಹಂಕಾರಗಳಿಂದ ಅಂಧರಾಗಿ, ಬಾಯಿದ್ದವನು ಮಾತಾಡಬೇಕು, ಅಕ್ಷರ ಬಲ್ಲವನು ಬರೆಯಬೇಕು ಎಂಬಂತೆ, ಗುರಿಯಿಲ್ಲದೆ ಕಲ್ಲು ಒಗೆಯುವ ಚಂದದಿಂದ ಏನೇನೋ ಮಾತಾಡುತ್ತ, ಏನೇನೋ ಬರೆಯುತ್ತ ಸಾಗಿದರೆ ಅನರ್ಥವಾಗದೇನುಮಾಡೀತು? ಈ ಅನವಸ್ಥೆಯು ಹಿಂದಾದ ಹೊರತು, ಅಥವಾ ಈ ಅನವಸ್ಥೆಯು ಅನಾದರಣೀಯವಾದ ಹೊರತು ದೇಶವು ಮುಂದಾಗಲಾರದು! ಯಾಕಂದರೆ ಮಾತುಗಳಾಗಲಿ, ಬರಹಗಳಾಗಲಿ ದೇಶದೊಳಗಿನ ಕಿಂಕರ್ತವ್ಯ ಬುದ್ಧಿಯು ಸಾಮಾನ್ಯ ಜನರಿಗೆ ಕರ್ತವ್ಯದ ಮಾರ್ಗವನ್ನು ತೋರಿಸುವ ಸಾಧನಗಳಾಗಿರುತ್ತವೆ. ಒಳ್ಳೆಯ ಉಪನ್ಯಾಸ-ಒಳ್ಳೆಯ ಲೇಖಗಳಿಂದ ದೇಶದೊಳಗಿನ ಜನರು ಒಳ್ಳೆಯವರಾಗುವದಕ್ಕಿಂತ, ಕೆಟ್ಟ ಉಪನ್ಯಾಸ-ಕೆಟ್ಟ ಲೇಖಗಳಿಂದ ದೇಶದ ಜನರು ಕೆಡುವ ಸಂಭವವು ವಿಶೇಷವಾಗಿ ಇರುತ್ತದೆ. ಯಾಕಂದರೆ ವಿಷದ ನಂಜು ಏರುವದು ಸುಲಭವಾಗಿದ್ದಷ್ಟು ನಂಜು ಇಳಿಯುವದು ಸುಲಭವಾಗಿರುವದಿಲ್ಲ. ಮನುಷ್ಯನಿಗೆ ಹುಟ್ಟುತ್ತಲೆ

ವಿಷಯುವೆಂಬ ವಿಷದ ನಂಜು ಏರುತ್ತಲಿರುತ್ತದೆ. ಅಂತಹ ಪ್ರಸಂಗದಲ್ಲಿ ವಿಷಯುದ ನಂಜುತಲೆಗೇರಿದ ಸಮ್ಮೋಹಿತ ಲೇಖಕರೂ-ವಕ್ತಾರರೂ ಮಾರ್ಗ ದರ್ಶಕರಾದರೆ ಕೇಳುವದೇನು? ಮಂಗನಿಗೆ ಸೆರೆ ಕುಡಿಸಿದಂತಾಗಿ ರಾಷ್ಟ್ರಕ್ಕೆ ರಾಷ್ಟ್ರವೇ ವಿಷಯುದ ಮಡುವಿನಲ್ಲಿ ಮುಮುಕತೊಡಗಿ ಪಾರತಂತ್ರ್ಯದ ದುರ್ಗಂಧವು ನಾಲ್ಕೂ ಕಡೆಗೆ ಮತ್ತಿಷ್ಟು ಹಬ್ಬುವದು! ಇದು, ಅನಧಿಕಾರಿ ಯಾದ ಶಿಲ್ಪಿಯು ಗಣಪತಿಯನ್ನು ಮಾಡಹೋಗಿ ಮಂಗನನ್ನು ಮಾಡಿದ ಹಾಗೆಯೇ ಸರಿ!

ಇಂತಹ ಅನರ್ಥವು ದೇಶಕ್ಕೆ ತಟ್ಟಬಾರದೆಂದು ಇಚ್ಛಿಸುತ್ತಿದ್ದರೆ, ಲೇಖಕರಾಗಲಿ, ವಕ್ತಾರರಾಗಲಿ ತಪಸ್ವಿದ್ಧರಾಗದೆ ತಮ್ಮ ಕೆಲಸಕ್ಕೆ ಕೈ ಹಾಕಬಾರದು; ಮತ್ತು ಅವರು ತಮ್ಮ ಕಾರ್ಯದಲ್ಲಿ ತೊಡಗಿರುವಾಗಲಾ ದರೂ ತಪಸ್ವಿಗಳಾಗಿಯೇ ಇರಬೇಕಾಗುವದೆಂಬದನ್ನು ಮರೆಯಬಾರದು. ಅವರ ತಪಸ್ಸು ೧ ಶಕ್ತಿ ಸಂಚಯನ, ೨ ಶಕ್ತಿ ಸಂಸ್ಕರಣ, ೩ ಶಕ್ತಿ ಸ್ಥಿರೀಕರಣ ಎಂದು ಮೂರು ವಿಧವಾಗಿರುವದು. ಈ ಜಗತ್ತಿನಲ್ಲಿ ಯಾವ ಕಾರ್ಯಗಳಾದರೂ ತಪಸ್ಸಿನಿಂದ ಸಾಧಿಸುತ್ತವಲ್ಲದೆ, ದುಡ್ಡಿನಿಂದಾಗಲಿ, ಬೇರೆ ಸಾಧನಗಳಿಂದಾಗಲಿ ಸಾಧಿಸುವದಿಲ್ಲವು. ಇದೇ ಮಾತು ಯೋಗ್ಯ ವಕ್ತಾರರಾಗಲಿಕ್ಕೂ, ಯೋಗ್ಯ ಲೇಖಕರಾಗಲಿಕ್ಕೂ ಹತ್ತುವದು. ಮಾತು ಗಾರಿಕೆಗೂ, ಬರವಣಿಗೆಗೂ ವಿಶೇಷ ಹೆಚ್ಚು ಕಡಿಮೆಯಿಲ್ಲ. ಮನಸ್ಸಿ ನಲ್ಲಿಯ ವಿಚಾರಗಳನ್ನು ಬಾಯಿಂದ ಸುಸಂಗತವಾಗಿ ಹೇಳುವದೇ ಮಾತುಗಾ ರಿಕೆಯು. ಮನಸ್ಸಿನಲ್ಲಿಯ ವಿಚಾರಗಳನ್ನು ಸುಸಂಗತವಾಗಿ ಕೈಯಿಂದ ಬರೆಯುವದೇ ಬರವಣಿಗೆಯು. ಈಗ ಲೇಖಕರು ಮಾಡತಕ್ಕ ತಪಸ್ಸನ್ನು ವರ್ಣಿಸಬೇಕಾಗಿದ್ದರೂ, ಆ ತಪಸ್ಸು ವಕ್ತಾರರಿಗೂ ಸಂಬಂಧಿಸುವದೆಂದು ತಿಳಿಯತಕ್ಕದ್ದು. ಈ ತಪಸ್ಸಿನ ವಿವರಣವು "ಲೇಖಕರು" ಎಂಬ ಪುಸ್ತಕ ದಲ್ಲಿ ವಿಸ್ತಾರವಾಗಿ ಬರುತ್ತಿದ್ದರೂ, ಅದರ ದಿಗ್ದರ್ಶನವನ್ನು ಇಲ್ಲಿ ಸ್ವಲ್ಪದ ರಲ್ಲಿ ಮಾಡುವೆನು.

೧ ಶಕ್ತಿಸಂಚಯನ—ಶಕ್ತಿಯ ಸ್ವಭಾವಗುಣವಾದ ಬಹಿರ್ಮುಖತೆ ಯನ್ನು ವಿವೇಕದಿಂದ ತಡೆದು ನಿಲ್ಲಿಸಿ ವಿಚಾರೋನ್ಮುಖವಾಗಮಾಡುತ್ತ

ಆದರ ಸಂಚಯ ಮಾಡುವದೇ ಶಕ್ತಿಸಂಚಯನವು. ಉಗಿಯ ಬಹಿರ್ಮುಖತೆಯನ್ನು ಬೆಣೆಯಿಂದ ಪ್ರತಿಬಂಧಿಸಿ ಅದರ ಸಂಚಯಮಾಡಿದಂತೆ ಅದರ ಶಕ್ತಿಯು ಹೆಚ್ಚಿ ಅದು ಕಾರ್ಯಕ್ಷಮವಾಗುವದು. ಇದೇ ಮಾತು ಲೇಖನ ಶಕ್ತಿಗೂ ಹತ್ತುವದು. ಲೇಖಕನಿಗೆ ವಿವೇಕದ ಬೆಣೆಯು ಕೈಸೇರಬೇಕಾದರೆ ಆತನು ಪರಮಾತ್ಮನ ಅಗಾಧಶಕ್ತಿಯ ಪ್ರದರ್ಶನವಾಗಿರುವ ಈ ಸೃಷ್ಟಿಯ ಅವಲೋಕನದಿಂದ ತನ್ನ ಪಾಮರತ್ವವನ್ನು ಅರಿತುಕೊಂಡು ಲೀನನಾಗಿರಬೇಕಾಗುವದು. ಪರಮಾತ್ಮನು ಸರ್ವಸಾಕ್ಷಿಯಾಗಿ ಇರುವನೆಂತಲೂ, ಆತನ ತಂತ್ರದಿಂದಲೇ ಸೃಷ್ಟಿಯ ವ್ಯವಹಾರಗಳೆಲ್ಲ ನಡೆದಿರುವವೆಂತಲೂ ತಿಳಿದು ಆತನಲ್ಲಿ ಭಕ್ತಿಯನ್ನೂ, ಧರ್ಮದಲ್ಲಿ ಹಾಗು ಗುರುಹಿರಿಯರಲ್ಲಿ ಶ್ರದ್ಧೆಯನ್ನೂ, ಈವರೆಗೆ ಜಗತ್ತಿನಲ್ಲಿ ಮಿಂಚಿಹೋಗಿ ಕೀರ್ತಿಶೇಷರಾಗಿರುವ ಮಹಾಪುರುಷರ ವಿಷಯವಾಗಿ ಆದರ ಭಾವವನ್ನೂ, ವಿವಿಧ ವಿದ್ಯೆ-ಕಲೆಗಳಿಂದ ಭೂಷಿತವಾಗಿರುವ ಲೋಕದ ವಿಷಯವಾಗಿ ಲಜ್ಜೆಯನ್ನೂ, ತನ್ನ ಅಜ್ಞಾನದ ವಿಷಯವಾಗಿ ಭಯವನ್ನೂ ವಹಿಸಬೇಕಾಗುವದು. ಹಾಗೆಮಾಡದೆ, ತನ್ನ ವಿಚಾರಗಳೇ ವಿಚಾರಗಳೆಂಬ ಅಹಂಕಾರವನ್ನು ತಾಳಿ, ಅನ್ಯರ ವಿಚಾರಗಳನ್ನು ಆದರ ಭಾವದಿಂದ ನೋಡದೆ, ತಟ್ಟನೆ ಕಾರ್ಯದಲ್ಲಿ ದುಮುಕುವ ಲೇಖಕರ ಶಕ್ತಿಯು ಕ್ಷೀಣವಾಗಿ ಅವರು ಹಾನಿಗೆ ಗುರಿಯಾಗುವರು.

**ಶಕ್ತಿಸಂಸ್ಕರಣ**—ಶಕ್ತಿಸಂಸ್ಕರಣವೆಂದರೆ ಶಕ್ತಿಯ ಶುದ್ಧೀಕರಣವು. ಇದು ಅಂತಶ್ಶುದ್ಧೀಕರಣವೆಂತಲೂ, ಬಹಿಶ್ಶುದ್ಧೀಕರಣವೆಂತಲೂ ಎರಡು ವಿಧವಾಗಿರುವದು. ಮನುಷ್ಯನ ಕರ್ತೃತ್ವ ಶಕ್ತಿಯು ದೈವೀ ಆಸುರೀ ಎಂಬ ಎರಡು ಭಾವಗಳಿಂದ ಯಾವಾಗಲೂ ಭಾವಿತವಾಗುತ್ತಿರುವದು. ದೈವೀ ಭಾವವು ಶಾಂತಿದಾಯಕಸದ್ಗುಣಗಳಿಂದ ಪೋಷಿತವಾದದ್ದಿರುವದು; ಆಸುರೀ ಭಾವವು ಅಶಾಂತಿದಾಯಕ ದುರ್ಗುಣಗಳಿಂದ ಪೋಷಿತವಾದದ್ದಿರುವದು. ದೈವೀ ಭಾವದ ಶಕ್ತಿಯು ಜಗತ್ತಿನ ಸುಖ-ಶಾಂತಿಗಳಿಗೂ, ಆಸುರೀ ಭಾವದ ಶಕ್ತಿಯು ಜಗತ್ತಿನ ದುಃಖ-ತಾಪಗಳಿಗೂ ಕಾರಣವಾಗಿರುವದರಿಂದ ಲೇಖಕನು ತನ್ನ ಲೇಖನ ಶಕ್ತಿಯನ್ನು ಆಸುರೀ ಭಾವದಿಂದ ದೂಷಿತವಾಗಮಾಡದೆ, ದೈವೀ ಭಾವದಿಂದ ಭೂಷಿತವಾಗುವಂತೆ ಮಾಡಿಕೊಳ್ಳಬೇಕು. ಇದೇ

ಲೇಖಕನ ಶಕ್ತಿಸಂಸ್ಕರಣವು. ಲೇಖಕನ ಶಕ್ತಿಯ ಅಂತಃಸಂಸ್ಕರಣಕ್ಕೆ ಮುಖ್ಯವಾಗಿ ಆಸ್ತಿಕ ಭಾವವೂ, ಸತ್ಸಂಗವೂ, ಸತ್ಕರ್ಮ ನಿರತೆಯೂ ಬೇಕಾಗುವವು. ಆಸ್ತಿಕ್ಯ ಭಾವದಿಂದ ಲೇಖಕನ ಶಕ್ತಿಯ ವಿಷಯದ ಅಹಂ ಭಾವವು ನಷ್ಟವಾಗುತ್ತದೆ; ಸತ್ಸಂಗದಿಂದ ಲೇಖಕನಲ್ಲಿಯ ದುರ್ಗುಣಗಳು ನಷ್ಟವಾಗಿ ಆತನ ಮನಸ್ಸು ಪಾಪರಹಿತವಾಗುತ್ತದೆ; ಸತ್ಕರ್ಮ ನಿರತೆ ಯಿಂದ ದುಷ್ಕರ್ಮಗಳಿಗೆ ಆಸ್ಪದವು ದೊರೆಯದಾಗುತ್ತದೆ. ಅದರಂತೆ, ಲೇಖಕನ ಶಕ್ತಿಯ ಬಹಿಶ್ಶುದ್ಧೀಕರಣಕ್ಕೆ ವ್ಯಾಕರಣಾದಿ ವಿವಿಧ ಶಾಸ್ತ್ರಗಳ ಅಧ್ಯಯನವೂ, ಲೋಕಪರಿಚಯವೂ ಕಾರಣವಾಗಿರುವವು. ಶಕ್ತಿಯ ಅಂತಃಸಂಸ್ಕರಣವು ಬಹಿಃಸಂಸ್ಕರಣಕ್ಕಿಂತ ಶ್ರೇಷ್ಠವಾದದ್ದು. ಭಾವ ದ್ಭಕ್ತರಾದ ಪುರಂದರದಾಸ-ಕನಕದಾಸಾದಿಗಳು ಶಕ್ತಿಯ ಅಂತಃಸಂಸ್ಕರ ಣವನ್ನು ಪ್ರಯತ್ನಪೂರ್ವಕ ಮಾಡಿಕೊಂಡರು. ಶಕ್ತಿಯ ಅಂತಃಸಂಸ್ಕರ ಣವಿಲ್ಲದ ಲೇಖಕರ ಲೇಖಗಳು ಲೇಖಕನಿಗಾಗಲಿ, ವಾಚಕರಿಗಾಗಲಿ ನಿಜ ವಾದ ಸುಖ-ಶಾಂತಿಗಳನ್ನು ಕೊಡಲಾರವು.

**ಶಕ್ತಿಸ್ಥಿರೀಕರಣ**—ಸುಸಂಸ್ಕೃತವಾದ ಲೇಖನ ಶಕ್ತಿಯು ಬಾಹ್ಯೋ ಪಾಧಿಯಿಂದ ಆಸುರೀಭಾವಕ್ಕೆ ಒಳಗಾಗದೆ ದೈವೀ ಭಾವದಲ್ಲಿಯೇ ಇರು ವಂತೆ ಯತ್ನಿಸುವದು ಶಕ್ತಿಯ ಸ್ಥಿರೀಕರಣವು. ಈಗಿನ ತಾಪದಾಯಕ ವಾದ ಆಸುರೀ ಸುಧಾರಣೆಯ ಕಾಲದಲ್ಲಂತು ಶಕ್ತಿಯನ್ನು ದೈವೀಭಾವದಲ್ಲಿ ಸ್ಥಿರೀಕರಿಸುವದು ಬಹು ಪ್ರಯಾಸದ ಕೆಲಸವು. ಎಂಥ ಸಂಯಮನ ಶೀಲನಿದ್ದರೂ ಈಗಿನ ಆಸುರೀಮಾಯೆಯ ಬಹಿಃಸುಧಾರಣೆಯ ಮೋಹ ಜಾಲದಲ್ಲಿ ಇಂದ್ರಿಯಗಳು ಸಿಕ್ಕುಬೀಳುವ ಸಂಭವವು ವಿಶೇಷವಾಗಿರುವದು. ಇದಕ್ಕಾಗಿ ಲೇಖಕನು ದೃಢವಾಗಿ ಧರ್ಮಾಶ್ರಯವನ್ನು ಮಾಡಿ ಪ್ರಸನ್ನಾಂ ತಃಕರಣನಾಗಿ ಇರಬೇಕು. ಅಂದರೆ ತನ್ನ ಲೇಖಗಳು ಅಧಾರ್ಮಿಕವಾಗಿ ಜನರಲ್ಲಿ ಅಧಾರ್ಮಿಕ ವೃತ್ತಿಯನ್ನು ಉಂಟುಮಾಡದಂತೆ ಎಚ್ಚರಪಡಲಿಕ್ಕೆ ಬರುವದು. ಈ ದಾರ್ಢ್ಯವು ಲೇಖಕನಿಗೆ ಬರಬೇಕಾದರೆ ಹಿಂದೆ ಶಕ್ತಿಸಂ ಚಯನ, ಶಕ್ತಿಸಂಸ್ಕರಣಗಳಲ್ಲಿ ಹೇಳಿರುವ ಸಾಧನ ಸಾಮುಗ್ರಿಗಳುಳ್ಳವ ನಾಗಿ ಯಾವಾಗಲೂ ಜಾಗರೂಕನಾಗಿರಬೇಕಾಗುವದಲ್ಲದೆ, ಗ್ರಂಥಾವಲೋ

ಕನಾದಿಗಳಿಂದ ವಿವಿಧ ವಿಷಯಗಳ ಜ್ಞಾನವನ್ನೂ, ಬಹು ಶ್ರುತತ್ವವನ್ನೂ ಸಂಪಾದಿಸಿಕೊಳ್ಳಬೇಕಾಗುವದು. ತನ್ನ ಧರ್ಮದೊಳಗಿನ ಸಾರ್ವತ್ರಿಕವಾದ ಸತ್ಯ-ಸಿದ್ಧಾಂತಗಳ ವಿಷಯವಾಗಿ ಸಂಶಯ ರಹಿತನಾಗಿರಬೇಕು. ಸತ್ಸಮಾಗಮದ ಪ್ರಭಾವದಿಂದ ತಾನು ಪಡೆದ ಅನುಭವವನ್ನೂ, ಅರಿತುಕೊಂಡ ಸಿದ್ಧಾಂತಗಳನ್ನೂ ದೃಢವಾಗಿ ನಂಬಿರಬೇಕು. ಹಾನಿಕಾರಕವಾದ ಎಂತಹ ಬಲಿಷ್ಠ ಲೌಕಿಕ ಸಹವಾಸವು ಒದಗಿದರೂ ಆ ನಂಬಿಗೆಯನ್ನು ಕಳೆದುಕೊಳ್ಳಬಾರದು. ಇದಕ್ಕಾಗಿ ವೈದಿಕ ಧರ್ಮದವರಾದ ನಾವು ಶ್ರುತಿ - ಸ್ಮೃತಿ - ಪುರಾಣಾದಿ ಧರ್ಮ - ಗ್ರಂಥಗಳ ವಿಷಯವಾಗಿಯೂ, ಅವುಗಳ ತಾತ್ವಿಕ ವಿಷಯಗಳ ವಿಚಾರವಾಗಿಯೂ ಪೂರ್ಣ ವಿಶ್ವಾಸವುಳ್ಳವನಾಗಿರಬೇಕು. ಇವು ಸತ್ಯಮಾರ್ಗವನ್ನು ತೋರಿಸುತ್ತ ಧಾರ್ಮಿಕರ ಶಾಂತಿಗೆ ಕಾರಣವಾಗುತ್ತ ಬಂದಿರುವದರಿಂದಲೇ ಇಂತಹ ನಾಸ್ತಿಕ ಕಾಲದಲ್ಲಿಯೂ ವಿವೇಕಿಗಳಿಗೆ ತಮ್ಮ ಪ್ರಭಾವವನ್ನು ತೋರಿಸುತ್ತಲೇ ಇರುವವೆಂದು ನಂಬಿರಬೇಕು. ಅಂದರೆ ಲೇಖಕನಿಗೆ ಒಂದು ಪ್ರಬಲವಾದ ಆಶ್ರಯವು ದೊರೆತಂತಾಗಿ ಆತನ ಮನಸ್ಸು ಚಂಚಲವಾಗದೆ ಆತನ ಸ್ಥಿರ ವಿಚಾರದ ಲೇಖಗಳು ಜನರಲ್ಲಿಯೂ ವಿಚಾರ ಸ್ಥೈರ್ಯವನ್ನು ಉಂಟುಮಾಡುವವು. ಇಷ್ಟುಮಾಡಿಯೂ ಮನಸ್ಸು ಚಂಚಲವಾದರೆ ದೇವರಿಗೆ ಶರಣುಹೋಗಬೇಕು, ಸಜ್ಜನರಿಗೆ ಶರಣು ಹೋಗಬೇಕು. ತನ್ನ ಮನಸ್ಸು ಶಾಂತವಾಗುವವರೆಗೆ ಇವೆರಡು ಆಶ್ರಯಗಳನ್ನು ಬಿಡಬಾರದು. ತಾಯಿಯಿಂದ ಇಚ್ಛಿತ ಪದಾರ್ಥವು ದೊರೆಯುವವರೆಗೆ ಮಕ್ಕಳು ತಾಯಿಯ ಬೆನ್ನುಬಿಡದಿರುವಂತೆ, ಲೇಖಕನು ತನಗೆ ಸಮಾಧಾನಕಾರಕ ಸ್ಫೂರ್ತಿಗಳು ಆಗುವವರೆಗೆ ಈ ಇಬ್ಬರು ತಾಯಂದಿರ ಬೆನ್ನ ಬಿಡಬಾರದು. ದೇವರು ನಮ್ಮನ್ನು ಹುಟ್ಟಿಸಿ ರಕ್ಷಿಸುವ ತಾಯಿಯು! ಸಜ್ಜನರು ನಮಗೆ ಒಳ್ಳೆಯ ಹಾದಿಯನ್ನು ತೋರಿಸುವ ತಾಯಿಯು! ಈ ಗುಟ್ಟಿನಮಾತನ್ನು ಲೇಖಕನು ಸರ್ವಥಾ ಮರೆಯತಕ್ಕದ್ದಲ್ಲ.

ಹೀಗೆ ಲೇಖಕನು ಮಾಡಬೇಕಾಗಿರುವ ಮೂರು ಬಗೆಯ ತಪಶ್ಚರ್ಯೆಗಳನ್ನೂ, ಅವನು ಯಾವಾಗಲೂ ತಪಸ್ವಿಯಾಗಿಯೇ ಇರುವ ಬಗೆಯನ್ನೂ "ಲೇಖಕರು" ಎಂಬ ಪುಸ್ತಕದಲ್ಲಿ ಸೋದಾಹರಣವಾಗಿ ವಿವರಿಸುವದಲ್ಲದೆ,

ಕಲೆಯೆಂದರೇನು? ವಿದ್ಯೆಯೆಂದರೇನು? ಕಲೆಗಳು ಯಾವವು? ವಿದ್ಯೆಗಳು ಯಾವವು? ಲೇಖಗಳ ಪ್ರಕಾರಗಳೆಷ್ಟು? ಆಯಾಪ್ರಕಾರದ ಲೇಖಗಳನ್ನು ಬರೆಯಲು ತಕ್ಕ ಅಧಿಕಾರಿಯ ಲಕ್ಷಣಗಳೇನು? ಲೇಖಗಳ ಭಾಷಾಂತರ ಮಾಡುವ ಬಗೆಹೇಗೆ? ರೂಪಾಂತರ ಮಾಡುವ ಬಗೆಹೇಗೆ? ಸ್ವತಂತ್ರ ಲೇಖಗಳೆಂದರೇನು? ಅವುಗಳನ್ನು ಬರೆಯಲು ಅಧಿಕಾರಿಯು ಯಾರು? ಇವುಗಳಲ್ಲಿ ಯಾವವು ಮಹತ್ವದವು? ಲೇಖಕರಲ್ಲಿ ವರ್ಗಗಳೆಷ್ಟು? ಲೇಖಗಳಲ್ಲಿ ಪ್ರಕಾರಗಳೆಷ್ಟು? ಮನೋರಂಜಕ ಲೇಖಗಳ ಸ್ವರೂಪವೇನು? ಮನಃಸಂಸ್ಕರಣದ ಲೇಖಗಳ ಸ್ವರೂಪವೇನು? ಮನಃಶಾಂತಿದಾಯಕ ಲೇಖಗಳ ಸ್ವರೂಪವೇನು? ತಾತ್ಕಾಲಿಕ ಲೇಖಗಳು ಯಾವವು? ಶಾಶ್ವತ ಲೇಖಗಳು ಯಾವವು? ಹೆಚ್ಚುದಿನ ಬಾಳತಕ್ಕ ಲೇಖಗಳ ಲಕ್ಷಣಗಳೇನು? ಉತ್ತಮ ಲೇಖಕರು ಬೈಲಿಗೆ ಬರಲಿಕ್ಕೆ, ಹಾಗು ಸಿಕ್ಕಸಿಕ್ಕಲೇಖಗಳಿಂದ ಮನಸ್ಸು ಉಚ್ಛೃಂಖಲವಾಗದಿರಲಿಕ್ಕೆ ಸಮಾಜದವರು ಮಾಡುವವ್ಯವಸ್ಥೆಯೇನು? ಇತ್ಯಾದಿವಿಷಯಗಳನ್ನು ಹಲವು ತಕ್ಕಪ್ರಕರಣಗಳಲ್ಲಿ ತಕ್ಕ ಕ್ರಮದಿಂದ ಸೇರಿಸಿ ಬರೆಯಬೇಕಾಗುವದು. ಬರೆಯತೊಡಗಿದ ಬಳಿಕ ಹೊಸವಿಷಯಗಳೂ ಸ್ಫುರಿಸಬಹುದು.



## ೯ ವಿದ್ಯಾರ್ಥಿ

### ಅಥವಾ

## ರಾಷ್ಟ್ರೀಯ-ಭವಿತವ್ಯತಾ

ಈ ವಿಷಯವನ್ನು ಕುರಿತು ಒಂದು ಪುಸ್ತಕ ಬರೆಯಬೇಕೆಂದು ಬಹು ದಿವಸಗಳಿಂದ ನನ್ನ ಮನಸ್ಸಿನಲ್ಲಿರುವದು. ಇಪ್ಪತ್ತುವರ್ಷ ಶಿಕ್ಷಕನಾಗಿ ಶಾಲೆಯಲ್ಲಿ ಕೆಲಸಮಾಡಿ ಅನುಭವಪಡೆದಿರಲು, ಈ ಕೆಲಸದಲ್ಲಿ ಕೈಹಾಕುವ ಒಂದು ಬಗೆಯ ಅಧಿಕಾರವು ನನಗಿರುತ್ತದೆಂದು ತಿಳಿದಿರುವೆನು. ಈಗಿನ ಪಾಶ್ಚಿಮಾತ್ಯ ಸಂಸ್ಕೃತಿಯಿಂದ ನಮ್ಮ ಆರ್ಯಸಂಸ್ಕೃತಿಯಮೇಲೆ ಎಷ್ಟೋ ದುಷ್ಪರಿಣಾಮಗಳಾಗಿ ಅದರಅನಿಷ್ಟಫಲಗಳನ್ನು ಈಗ ನಾವು ಅನುಭವಿಸುತ್ತಿರುವೆವು! ಮುಂದೆಯೂ ಎಷ್ಟುದಿವಸ ಅನುಭವಿಸಬೇಕಾಗಿದೆಯೋ ದೇವ

ರಿಗೆ ಗೊತ್ತು! ಆದರೆ ಆ ಎಲ್ಲ ದುಷ್ಪರಿಣಾಮಗಳಲ್ಲಿ ನಮ್ಮ ವಿದ್ಯಾರ್ಥಿಗಳ ಧಾರ್ಮಿಕವಾದ ಆರ್ಯಶೀಲದ ಮೇಲೆ ಪಾಶ್ಚಿಮಾತ್ಯರ ಲೌಕಿಕಶೀಲದ ವರ್ಚಸ್ಸುಬಿದ್ದು ಆಗುತ್ತಿರುವ ದುಷ್ಪರಿಣಾಮಗಳು ನಮ್ಮ ರಾಷ್ಟ್ರಘಾತಕ್ಕೆ ಮುಖ್ಯಕಾರಣಗಳಾಗಿರುತ್ತವೆ. ರಾಷ್ಟ್ರದ ಆಗು-ಹೋಗುಗಳು ವಿದ್ಯಾರ್ಥಿಗಳನ್ನೇ ಅನುಸರಿಸಿರುವದರಿಂದ ಇದಕ್ಕೆ ರಾಷ್ಟ್ರೀಯ ಭವಿತವ್ಯತೆ ಎಂಬ ಮತ್ತೊಂದು ಹೆಸರು ಕೊಟ್ಟಿದೆ.

ಮನುಷ್ಯನು ಹುಟ್ಟಿದಂದಿನಿಂದ ಸಾಯುವವರೆಗೆ ವಿದ್ಯಾರ್ಥಿಯಾಗಿಯೇ ಕಾಲಹರಣ ಮಾಡಬೇಕಾಗುವದು; ಅಂದರೆ ಒಂದಿಲ್ಲೊಂದು ಶಕ್ತಿಗೆ ಆತನು ವಿಧೇಯನಾಗಿ ನಡಕೊಳ್ಳಬೇಕಾಗುವನು. ಮನುಷ್ಯನು ತನ್ನ ಆಯುಷ್ಯದಲ್ಲಿ ಬಾಲ್ಯ-ಯೌವನ-ವಾರ್ಧಕ್ಯ ಎಂಬ ಮೂರುಅವಸ್ಥೆಗಳನ್ನು ಅನುಭವಿಸಬೇಕಾಗುವದೆಂಬದಂತು ಪ್ರಸಿದ್ಧವಾದದ್ದು. ನನ್ನ ವಿಷಯವಿವೇಚನಕ್ಕೆ ಅನುಕೂಲವಾಗಬೇಕೆಂದು ಈ ಅವಸ್ಥೆಗಳ ಕಾಲಮರ್ಯಾದೆಯನ್ನು ಹೀಗೆ ಮಾಡಿದ್ದೇನೆ—ಹುಟ್ಟಿದಂದಿನಿಂದ ಇಪ್ಪತ್ತುವರ್ಷಗಳವರೆಗೆ ಬಾಲ್ಯ, ಇಪ್ಪತ್ತೊಂದುವರ್ಷಗಳಿಂದ ಐವತ್ತುವರ್ಷಗಳವರೆಗೆ ಯೌವನ, ಅದರ ಮುಂದಿನ ಕಾಲವು ವಾರ್ಧಕ್ಯ. ಈ ಒಂದೊಂದು ಅವಸ್ಥೆಗಳಲ್ಲಿ ಮೂರು ಮೂರು ಕಾಲಗಳು ಕ್ರಮಿಸುವವು. ಬಾಲ್ಯದಲ್ಲಿ ಪರಾಧೀನಕಾಲ-ಕ್ರೀಡಾಕಾಲ-ಶಿಕ್ಷಾಕಾಲ ಎಂಬವೂ, ಯೌವನದಲ್ಲಿಸ್ವಾತಂತ್ರ್ಯಕಾಲ-ಪ್ರೌಢಕಾಲ-ಪರಿಪಕ್ವಕಾಲ ಎಂಬವೂ, ಮುಪ್ಪಿನಲ್ಲಿ ಮೌನಕಾಲ, ವಿಧೇಯಕಾಲ, ಪತನ ಕಾಲ ಎಂಬವೂ ಆ ಕಾಲತ್ರಯಗಳಾಗಿರುವವು. ಬಾಲ್ಯದ ಪರಾಧೀನ ಕಾಲ–ಕ್ರೀಡಾ ಕಾಲಗಳಲ್ಲಿ, ಅಂದರೆ ಹುಟ್ಟಿದಂದಿನಿಂದ ಐದು ವರ್ಷದವರಾಗುವವರೆಗೆ ಹುಡುಗರಾಗಿ ತಾಯಿತಂದೆಗಳ ಶಾಸನಶಕ್ತಿಗೆ ಒಳಗಾಗಿ ನಡೆದುಕೊಳ್ಳಬೇಕಾಗುವದು. ಬಾಲ್ಯದ ಶಿಕ್ಷಾ ಕಾಲದಲ್ಲಿ ವಿದ್ಯಾರ್ಥಿಗಳಾಗಿ ಗುರುಗಳ ವಿದ್ಯಾಶಕ್ತಿಗೆ ವಿಧೇಯರಾಗಿ ನಡಕೊಳ್ಳಬೇಕಾಗುವದು ; ಅದರಂತೆ, ಯೌವನದ ಸ್ವಾತಂತ್ರ್ಯಕಾಲದಲ್ಲಿ ವ್ಯಾವಹಾರಿಕರಾಗಿ ಲೋಕದ ಲಜ್ಜಾ-ಭಯಗಳಿಗೆ ವಿಧೇಯರಾಗಿ ನಡಕೊಳ್ಳಬೇಕಾಗುವದು, ಯೌವನದ ಪ್ರೌಢಕಾಲ-ಪರಿಪಕ್ವ ಕಾಲಗಳಲ್ಲಿ ವಿಚಾರವಂತರಾಗಿ ವಿವೇಕ ಶಕ್ತಿಗೆ

ವಿಧೇಯರಾಗಿ ನಡಕೊಳ್ಳಬೇಕಾಗುವದು ; ಹಾಗೆಯೇ ವಾರ್ಧಕ್ಯದ ಮೌನ ಕಾಲ-ವಿಧೇಯಕಾಲ-ಪತನ ಕಾಲಗಳಲ್ಲಿ ಮುಮುಕ್ಷುಗಳಾಗಿ ಪ್ರಾಮುಖ್ಯವಾಗಿ ಆಧ್ಯಾತ್ಮಿಕ ಶಕ್ತಿಗೆ ವಿಧೇಯರಾಗಿ ನಡಕೊಳ್ಳಬೇಕಾಗುವದು. ಹೀಗೆ ನಡೆದುಕೊಳ್ಳದವರು ರಾಷ್ಟ್ರಘಾತಕರಷ್ಟೇ ಅಲ್ಲ, ಆತ್ಮಘಾತಕರು ! ಅವರಲ್ಲಿಯೂ ವಿದ್ಯಾರ್ಥಿಗಳು ವಿದ್ಯಾಶಕ್ತಿಗೆ ಅರ್ಥಾತ್ ಗುರುಗಳಿಗೆ ವಿಧೇಯರಾಗಿ ನಡೆದುಕೊಳ್ಳದಿದ್ದರೆ ಆತ್ಮಘಾತಕ-ರಾಷ್ಟ್ರಘಾತಕರಲ್ಲಿ ಪ್ರಮುಖರು ಹೇಗೆ ಆಗುವರೆಂಬದನ್ನು ಕುರಿತೇ "ವಿದ್ಯಾರ್ಥಿ" ಎಂಬ ಪುಸ್ತಕದಲ್ಲಿ ವಿಸ್ತಾರವಾಗಿ ಬರೆಯಬೇಕೆಂದಿರುವೆನು.

ಮನುಷ್ಯರಲ್ಲಿ ಪಾಮರರು, ವಿಷಯಿಗಳು, ಮುಮುಕ್ಷುಗಳು, ಮುಕ್ತರು ಎಂಬ ನಾಲ್ಕು ಬಗೆಯವರಿರುವರು. ಇವರಲ್ಲಿ ಪಾಮರರ ಹಾಗು ವಿಷಯಿಗಳ ಸಂಖ್ಯೆಯೇ ಜಗತ್ತಿನಲ್ಲಿ ಹೆಚ್ಚು ಇರುವದು. ಅದರಲ್ಲಿಯೂ ಪಾಮರರ ಸಂಖ್ಯೆಯು ಮತ್ತೂ ಹೆಚ್ಚು. ಇನ್ನು ಮುಮುಕ್ಷು-ಮುಕ್ತರ ಸಂಖ್ಯೆಯು ಉತ್ತರೋತ್ತರ ಕಡಿಮೆಯಾಗಿರುವದು; ಅವರಲ್ಲಿಯೂ ಮುಕ್ತರ ಸಂಖ್ಯೆಯು ತೀರ ಕಡಿಮೆ. ಈ ನಾಲ್ಕು ಬಗೆಯ ಜನರಲ್ಲಿ ಮುಮುಕ್ಷು-ಮುಕ್ತರ ವಿಚಾರಮಾಡುವದು ಪ್ರಕೃತದ ವಿಷಯಕ್ಕೆ ಪ್ರತ್ಯಕ್ಷ ಸಂಬಂಧಿಸಿದ್ದಲ್ಲದ್ದರಿಂದ, ಈಗ ಪಾಮರರ ಹಾಗು ವಿಷಯಿಗಳ ಲಕ್ಷಣಗಳನ್ನೇ ಸಂಕ್ಷೇಪದಿಂದ ಹೇಳುವೆನು; ಯಾಕಂದರೆ ವಿದ್ಯಾರ್ಥಿಗಳಿಗೆ ನಾವೇನು ಪಾಮರರಾಗುತ್ತಿರುವೆವೋ ವಿಷಯಿಗಳಾಗುತ್ತಿರುವೆವೋ, ಎಂಬದನ್ನು ತಮ್ಮೊಳಗೆ ತಾವು ವಿಚಾರಮಾಡಿ ತಿಳಿದುಕೊಳ್ಳಲಿಕ್ಕೆ ನೆಟ್ಟಗಾಗುವದು.

**ಪಾಮರರು**—ಅಧಾರ್ಮಿಕವಾದ ಅಹಿತಕಾರಕ-ವಿಷಯಭೋಗದಲ್ಲಿ ತೊಡಗಿದವರು ಪಾಮರರು. ಇವರು ಸಾರಾಸಾರ ವಿಚಾರವಿಲ್ಲದವರೂ, ಪಾಪ ಪುಣ್ಯಗಳ ಅಂಜಿಕೆಯಿಲ್ಲದವರೂ, ವಿಧಿ-ನಿಷೇಧಗಳನ್ನು ತಿಳಿಯದವರೂ, ಶುಭಾಶುಭ ಶೂನ್ಯರೂ, ಶ್ರುತಿ-ಶಾಸ್ತ್ರ-ಸಂತರನ್ನು ವಿರೋಧಿಸುವವರೂ, ನಿರಂಕುಶರಾಗಿ ಪಶುಗಳಂತೆ ವ್ಯವಹರಿಸುವವರೂ ಆಗಿರುವರು. ಇವರು ಅಧೋಗತಿಗೆ ಅಧಿಕಾರಿಗಳು. ಇವರ ಸ್ವಚ್ಛಂದ ವೃತ್ತಿಗೆ ಗುರುಹಿರಿಯರು ಅಡ್ಡಬರುವದರಿಂದ, ಅಂದರೆ ಒಳ್ಳೆಯ ದಾರಿಯಿಂದ ನಡೆಯಿ

ರೆಂದು ಹೇಳುವದರಿಂದ ಅವರ ಮಾತು ಪಾಮರರಿಗೆ ವಿಷತುಲ್ಯವಾಗುವದು; ಅಂತಹ ಹಿತಬೋಧಕರನ್ನು ಇವರು ವಿರೋಧಿಸುವರು. ದುಷ್ಟ ಸಂಗತಿಗೆ ಇವರು ಮೆಚ್ಚಿದವರಾಗಿರುವರು. ಇವರು ಧರ್ಮ-ನೀತಿಗಳನ್ನೂ, ಆಪ್ತ-ಸುಜನರನ್ನೂ ಲೆಕ್ಕಿಸರು. ಇವರು ಸ್ತ್ರೀ-ಮದ್ಯ-ದ್ಯೂತಗಳ ವ್ಯವಹಾರಕ್ಕೆ ಮೆಚ್ಚಿದವರಾಗಿರುವರು. ಇವರು ಪ್ರಸಂಗದಲ್ಲಿ ಕಳವು ಮಾಡಲಿಕ್ಕೂ ಹೇಸು ವವರಲ್ಲ. ವಿಚಾರವಂತರು ಪಾಮರರ ನೆರಳಿಗೆ ಸಹ ಹೋಗತಕ್ಕದ್ದಲ್ಲ. ಅವರ ಯಾವ ಲಕ್ಷಣಗಳೂ ತಮ್ಮಲ್ಲಿ ಉಂಟಾಗದಂತೆ ಎಚ್ಚರಪಡತಕ್ಕದ್ದು.

**ವಿಷಯಿಗಳು**—ಧಾರ್ಮಿಕವಾದ ಹಿತಕಾರಕ ವಿಷಯಭೋಗದಲ್ಲಿ ತೊಡಗಿದವರು ವಿಷಯಿಗಳು. ಇವರು ಸಾರಾಸಾರ ವಿಚಾರವುಳ್ಳವರೂ, ವಿದ್ಯಾ-ವಿನಯಾದಿ ಗುಣಗಳಿಂದ ಸಂಪನ್ನರಾದವರೂ, ಪಾಪ ಭೀರುಗಳೂ, ವಿಧಿ-ನಿಷೇಧಗಳನ್ನು ಅರಿತವರೂ, ಶ್ರುತಿ- ಶಾಸ್ತ್ರ- ಗುರು- ಹಿರಿಯರನ್ನು ಸೇವಿಸುವವರೂ, ವ್ಯವಹಾರ ಕುಶಲರೂ ಇರುವರು. ಇವರು ತಮ್ಮ ತಮ್ಮ ಜಾತಿಗೆ, ತಮ್ಮತಮ್ಮ ಧರ್ಮಕ್ಕೆ ಉಚಿತವಾದ ನಿತ್ಯ-ನೈಮಿತ್ತಿಕ ಕರ್ಮ ಗಳನ್ನು ಮಾಡುವರು. ನಿಷಿದ್ಧ ಕರ್ಮಗಳ ಕಡೆಗೆ, ಅಥವಾ ನಿಷಿದ್ಧ ವಿಷಯಗಳ ಕಡೆಗೆ ಹಣಿಕಿನೋಡರು. ಈ ಬಗೆಯಾಗಿ ಇವರು ಐಹಿಕದ ವಿಹಿತ ವಿಷಯಭೋಗಗಳನ್ನು ಭೋಗಿಸುವರು. ಇವರು ಉತ್ತರೋತ್ತರ ಪುಣ್ಯ ಕರ್ಮಗಳನ್ನು ಮಾಡುತ್ತ ಉತ್ತರೋತ್ತರ ಸುಖವೃದ್ಧಿಯನ್ನು ಮಾಡಿಕೊಳ್ಳುವರು. ಇವರು ವೈರಾಗ್ಯಕ್ಕೂ, ಆತ್ಮಾನಾತ್ಮವಿಚಾರಕ್ಕೂ ಲಕ್ಷಕೊಡದಿರುವದೊಂದೇ ಇವರಲ್ಲಿಯ ದೋಷವು. ಆದ್ದರಿಂದ ಮಹತ್ಕಾಂಕ್ಷಿಗಳಾದ ಇವರನ್ನು ರಾಗ-ದ್ವೇಷಗಳು ಬಾಧಿಸುವದೊಂದು ಭಯವಿರುವದು; ಆದರೂ ಪಾಮರರಿಗಿಂತ ಇವರು ಬೇಕು. ಧಾರ್ಮಿಕವಾದ ಹಿತಕಾರಕ ವಿಷಯ ಭೋಗಕ್ಕೆ ಇವರೇ ಅಧಿಕಾರಿಗಳು.

ಈ ಪಾಮರರ ಹಾಗು ವಿಷಯಿಗಳ ಲಕ್ಷಣಗಳ ಮೇಲಿಂದ ವಿಚಾರ ಮಾಡಿ ನೋಡಿದರೆ, ಮನುಷ್ಯನು ಬಾಲ್ಯದ ಪರಾಧೀನ ಕಾಲ-ಕ್ರೀಡಾಕಾಲ ಗಳಲ್ಲಿ ಪಾಮರರಲ್ಲಿ ಪಾಮರನಾಗಿರುತ್ತಾನೆಂದು ಹೇಳಬಹುದು. ಆಕಾಲ ದಲ್ಲಿ ಆತನು ಸ್ವಚ್ಛಂದವೃತ್ತಿಗೆ ಮೆಚ್ಚಿದವನಾಗಿರುವನು ಜಾಯಿ ಸವಿಬಂದ

ದ್ದನ್ನು ತಿನ್ನುವದು, ಮನಸ್ಸಿಗೆ ಬಂದಲ್ಲಿ ತಿರುಗುವದು ಅವನ ಕೆಲಸಗಳು. ಅವನು ಹೀಗೆಯೇ ಮನಸ್ಸಿಗೆಬಂದಂತೆ ನಡೆದರೆ ದ್ವಿಪಾದ ಪಶುವಾಗುವಲ್ಲಿ ಸಂಶಯವಿಲ್ಲ; ಆದರೆ ಅವನ ಈ ಸ್ವಚ್ಛಂದವೃತ್ತಿಗೆ ಶಿಕ್ಷಣದ ಯೋಗದಿಂದ ದೊಡ್ಡ ಪ್ರತಿಬಂಧವು ಉಂಟಾಗಿ ಆತನು ತಿದ್ದುಪಡೆಹೊಂದಿ ಮನುಷ್ಯನಾಗುವನು. ಹೀಗೆ ಪಾಮರರನ್ನು ಜ್ಞಾನಿಗಳಾಗಮಾಡಿ ಪಶುಸ್ಥಿತಿಯಿಂದ ಅವರನ್ನು ಉದ್ಧರಿಸುವದು ಶಿಕ್ಷಾಕಾಲದ ಉದ್ದೇಶವಾಗಿರುವದರಿಂದ, ಈ ಕಾಲದ ಮಹತ್ವವು ವಿಶೇಷವಾಗಿರುವದು, ಮನುಷ್ಯನ ಜೀವನಯಾತ್ರೆಯ ಸ್ವರೂಪವು ಈ ಶಿಕ್ಷಾಕಾಲದ ನಡತೆಯನ್ನು ಅನುಸರಿಸಿ ಒಳ್ಳೆಯದಾಗಲಿ, ಕೆಟ್ಟದಾಗಲಿ ಆಗುವದು. ಶಿಕ್ಷಣಕ್ಕಾಗಿ ಹುಡುಗರನ್ನು ಗುರುಗಳ ಸಮೀಪಕ್ಕೆ ಕರೆದೊಯ್ಯುವ ಕಾಲವು ಬಹುಮಹತ್ವದ್ದು. ಬ್ರಾಹ್ಮಣ-ಕ್ಷತ್ರಿಯ-ವೈಶ್ಯರೆಂಬ ತ್ರೈವರ್ಣಿಕರಲ್ಲ ಇದಕ್ಕೆ ಉಪನಯನವೆನ್ನುವರು. ಹೇಗಿದ್ದರೂ ಎಂಟುವರ್ಷದವರಾಗುವದರೊಳಗೆ ಸಾಧಾರಣವಾಗಿ ಹುಡುಗರನ್ನು ಪಾಠಶಾಲೆಗೆ ಕಳಿಸುವದು ಎಲ್ಲರಲ್ಲಿಯೂ ಈಗ ವಾಡಿಕೆಯಾಗಿರುವದು.

ವಿದ್ಯಾರ್ಥಿಯು ವಿದ್ಯೆಯನ್ನು ಸಂಪಾದಿಸುವ ಉಪಾಯಗಳು ಮೂರು. ಅವುಗಳಲ್ಲಿ ಗುರುಸೇವೆಯಿಂದ ವಿದ್ಯೆಯನ್ನು ಸಂಪಾದಿಸುವದು ಶ್ರೇಷ್ಠವಾದದ್ದು; ಯಾಕಂದರೆ ಭಕ್ತಿಯಿಂದ ಗುರುಸೇವೆಯನ್ನು ಮಾಡುವಾಗ ವಿದ್ಯಾರ್ಥಿಗಳಲ್ಲಿ ನಯ-ವಿನಯಾದಿ ಹಲವು ಸದ್ಗುಣಗಳು ಉಂಟಾಗುತ್ತವೆ. ವಿದ್ಯೆಯು ಸದ್ಗುಣಗಳಿಂದ ಅಲಂಕೃತವಾಗಿದ್ದರೆ ಮಾತ್ರ ಸ್ವಪರಹಿತಕ್ಕೆ ಕಾರಣವಾಗುವದು. ಇನ್ನು ದುಡ್ಡುಕೊಟ್ಟು ವಿದ್ಯೆಯನ್ನು ಸಂಪಾದಿಸುವ ಎರಡನೆಯ ಉಪಾಯವು ಸಾಮಾನ್ಯವಾದದ್ದು; ಯಾಕಂದರೆ ಈ ಉಪಾಯದಲ್ಲಿ ಗುರುಸೇವೆಯು ಅವಶ್ಯಕರ್ತವ್ಯವಾಗಿರದ್ದರಿಂದ ವಿದ್ಯಾರ್ಥಿಗಳು ಈ ಉಪಾಯದಿಂದ ಸದ್ಗುಣಿಗಳು ಆಗಿಯೇ ತೀರುವರೆಂದು ಹೇಳಲಾಗುವದಿಲ್ಲ. ಒಮ್ಮೊಮ್ಮೆ ತಮ್ಮ ದ್ರವ್ಯ-ಅಧಿಕಾರ-ವಿದ್ಯೆಗಳ ಮದದಿಂದ ವಿದ್ಯಾರ್ಥಿಗಳು ಉದ್ಧತರಾಗಿ ಗುರುಗಳ ಅಪಮಾನ ಮಾಡಲಿಕ್ಕೂ ಹಿಂದೆಮುಂದೆ ನೋಡುವದಿಲ್ಲ; ಯಾಕಂದರೆ ದುಡ್ಡುಕೊಟ್ಟು ಗುರುಗಳನ್ನು ಕೊಂಡುಕೊಂಡಂತೆ ಆಗಿರುವದರಿಂದ ಗುರುಗಳು ತಮ್ಮ ಆಳು ಎಂಬ ಭಾವವು ವಿದ್ಯಾರ್ಥಿಗಳಮನಸ್ಸಿನಲ್ಲಿ ಉಂಟಾ

ಗುವ ಸಂಭವವಿರುತ್ತದೆ. ದುಡ್ಡಿನ ದಾಸರಾದದ್ದರಿಂದ ಗುರುಗಳ ಸತ್ತೆಯೂ ವಿದ್ಯಾರ್ಥಿಗಳ ಮೇಲೆ ಅಷ್ಟು ನಡೆಯುವದಿಲ್ಲ. ಆದರಲ್ಲಿ ಪರಿಪೂರ್ಣ ವಿದ್ಯೆಯುಳ್ಳ ಸದ್ಗುಣ ಮಂಡಿತ ತೇಜಸ್ವಿ ಗುರುಗಳ ವರ್ಚಸ್ಸು ವಿದ್ಯಾರ್ಥಿಗಳನ್ನು ಅಲ್ಪಸ್ವಲ್ಪ ಸದ್ಗುಣಿಗಳಾಗಮಾಡಬಹುದಾದರೂ, ಈಗಿನ ಪರೀಕ್ಷೆಯ ಪಡಿಅಚ್ಚಿನಲ್ಲಿ ಬಡಬಡ ಒತ್ತಿ ತೆಗೆದ ಗುರುಗಳಲ್ಲಿ ಅಂತಹ ಯೋಗ್ಯತೆಯುಳ್ಳವರು ಅಪರೂಪವೆಂತಲೇ ಹೇಳಬೇಕಾಗುವದು. ಒಟ್ಟಿನಲ್ಲಿ ದುಡ್ಡುಕೊಟ್ಟು ವಿದ್ಯೆ ಕಲಿಯುವದು ವಿದ್ಯೆಯ ಒಂದು ಬಗೆಯ ಕ್ರಯ ವಿಕ್ರಯವಾಗಿರುವದಲ್ಲದೆ, ತಪಸ್ಸಿದ್ಧವಾದದ್ದಲ್ಲದ್ದರಿಂದ ಅಂತಹ ವಿದ್ಯೆಯು ಸ್ವಪರಹಿತ ಸಾಧನದಲ್ಲಿ ಅಷ್ಟು ಸಮರ್ಥವಾದದ್ದಲ್ಲ. ಇನ್ನು ವಿದ್ಯೆಯನ್ನು ಸಂಪಾದಿಸುವ ಮೂರನೆಯ ಉಪಾಯವೆಂದರೆ, ಒಂದು ವಿದ್ಯೆಯನ್ನು ತಾನು ಮಂದಿಗೆ ಕಲಿಸಿ, ಮಂದಿಯಲ್ಲಿಯ ವಿದ್ಯೆಯನ್ನು ತಾನು ಕಲಿಯುವದು! ಆದರೆ ಯಾವ ವಿದ್ಯೆಯನ್ನೂ ಅರಿಯದಿರುವ ಹುಡುಗರಿಗೆ ಇದು ಉಪಯುಕ್ತವಲ್ಲದ್ದರಿಂದ ಇದರ ವಿಚಾರವು ಇಲ್ಲಿ ಬೇಡ. ಒಟ್ಟಿಗೆ, ವಿದ್ಯೆಯನ್ನು ಸಂಪಾದಿಸುವ ಈ ಮೂರು ಉಪಾಯಗಳಲ್ಲಿ ಗುರುಸೇವೆಯಿಂದ ವಿದ್ಯೆ ಕಲಿಯುವದು ಸ್ವಪರ ಹಿತ ದೃಷ್ಟಿಯಿಂದ ಶ್ರೇಷ್ಠವಾಗಿದ್ದರೂ, ಈಗಿನ ನವನಾಗರಿಕತೆಯ ಕಾಲದಲ್ಲಿ ಸ್ವಾರ್ಥಕ್ಕಾಗಿ ದುಡ್ಡುಕೊಟ್ಟು ವಿದ್ಯೆಯನ್ನು ಕೊಂಡುಕೊಳ್ಳುವದೂ, ಆ ಕೊಂಡುಕೊಂಡ ವಿದ್ಯೆಯನ್ನು ಪುನಃ ಸ್ವಾರ್ಥಕ್ಕಾಗಿ ಆದಷ್ಟು ಹೆಚ್ಚು ಬೆಲೆಗೆ ಮಾರಿಕೊಳ್ಳುವದೂ ಶಿಷ್ಟ ಸಾಂಪ್ರದಾಯವೇ ಆಗಿರುವದರಿಂದ, ನಿಜವಾದ ಸ್ವಪರಹಿತದ ಮಾತು ಈಗ ಅಷ್ಟಕ್ಕಷ್ಟೇ ಆಗಿರುತ್ತದೆಂದು ತಡೆಯಿಲ್ಲದೆ ಹೇಳಬಹುದು.

ಯಾವ ಉಪಾಯದಿಂದ ವಿದ್ಯೆಯನ್ನು ಸಂಪಾದಿಸಿದರೂ ವಿದ್ಯಾರ್ಥಿಯು ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸಮಾಡಬೇಕಾಗುವದೆಂಬ ಮಾತು ಸಾರ್ವತ್ರಿಕವಾದದ್ದು. ಬ್ರಹ್ಮಚರ್ಯದ ಮುಖ್ಯವಾದ ಉದ್ದೇಶವು ಇಂದ್ರಿಯ ನಿಗ್ರಹವು. ಇಂದ್ರಿಯಗಳು ಅಂತರಿಂದ್ರಿಯ, ಬಹಿರಿಂದ್ರಿಯ ಎಂದು ಎರಡು ವಿಧಗಳಾಗಿದ್ದು, ಬಹಿರಿಂದ್ರಿಯಗಳಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯ ಎಂಬ ಎರಡುವಿಧದ ಇಂದ್ರಿಯಗಳಿರುವವು. ಅಂತರಿಂದ್ರಿಯ

ಗಳಲ್ಲಿ ಮುಖ್ಯವಾದದ್ದು ಮನಸ್ಸು. ಜ್ಞಾನೇಂದ್ರಿಯಗಳು ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಎಂಬಿವು ಐದು ಇರುವವು; ಕರ್ಮೇಂದ್ರಿಯಗಳು ಮಾತು, ಕೈ, ಕಾಲು, ಮಲದ್ವಾರ, ಮೂತ್ರದ್ವಾರ ಎಂಬವು ಐದು ಇರುವವು. ಹೀಗೆ ಬ್ರಹ್ಮಚಾರಿಯಾದವನು ಒಟ್ಟಿಗೆ ಹನ್ನೊಂದು ಇಂದ್ರಿಯಗಳ ನಿಗ್ರಹವಮಾಡ ಬೇಕಾಗುವದು. ಇಂದ್ರಿಯಗಳು ಸಿಕ್ಕಹಾಗೆ ಸಿಕ್ಕತ್ತ ಹರಿದು ಹೋಗ ದಂತೆ ನೈತಿಕ ಧಾರ್ಮಿಕ ನಿಯಮಗಳಿಂದ ಅವನ್ನು ಪ್ರತಿಬಂಧಿಸುವದೇ ಇಂದ್ರಿಯ ನಿಗ್ರಹವು. ಅಂತರಿಂದ್ರಿಯವಾದ ಮನಸ್ಸು ಸಿಕ್ಕಸಿಕ್ಕ ವಿಷಯಗಳ ಕಡೆಗೆ ಹರಿದುಹೋಗಿ ಮಂಗಚೇಷ್ಟೆ ಮಾಡಬೇಕೆನ್ನುವದು. ಜ್ಞಾನೇಂದ್ರಿಯ ಗಳಲ್ಲಿ ಕಣ್ಣು ಬೇಕಾದದ್ದನ್ನು ನೋಡಲಿಕ್ಕೂ, ಕಿವಿಗಳು ಬೇಕಾದದ್ದನ್ನು ಕೇಳಲಿಕ್ಕೂ, ನಾಲಿಗೆಯು ಬೇಕಾದದ್ದನ್ನು ತಿನ್ನಲಿಕ್ಕೂ, ಮೂಗು ವಿವಿಧ ಸುಗಂಧ ಪದಾರ್ಥಗಳನ್ನು ಮೂಸಲಿಕ್ಕೂ, ಚರ್ಮವು ಗಂಧಾದಿ ಸುಖ ಸ್ಪರ್ಶಗಳ ಸುಖ ಭೋಗಿಸಲಿಕ್ಕೂ ಮುಂದುವರಿಯುವವು. ಅದರಂತೆ ಕರ್ಮೇಂದ್ರಿಯಗಳಲ್ಲಿ ವಾಣಿಯು ಸಿಕ್ಕಹಾಗೆ ಹರಟಬೇಕೆನ್ನುವದು, ಕೈಗಳು ಬೇಕಾದದ್ದನ್ನು ಮಾಡಬೇಕೆನ್ನುವವು, ಕಾಲುಗಳು ಬೇಕಾದಲ್ಲಿಗೆ ಹೋಗ ಬೇಕೆನ್ನುವವು, ಅದರಂತೆ ಉಳಿದ ಕರ್ಮೇಂದ್ರಿಯಗಳೂ ಅನಿಯಮಿತ ತನದ ತಮ್ಮ ವ್ಯವಹಾರಗಳನ್ನು ನಡೆಸಬೇಕೆನ್ನುವವು. ಆದರೆ ವಿದ್ಯಾರ್ಥಿಯು ಗುರುಹಿರಿಯರ ಆಜ್ಞೆಗೆ ಒಳಗಾಗಿ ಮನಸ್ಸನ್ನೂ, ಧಾರ್ಮಿಕ ನೈತಿಕ ನಿಯಮಗಳನ್ನು ಪಾಲಿಸುತ್ತ ಜ್ಞಾನೇಂದ್ರಿಯ- ಕರ್ಮೇಂದ್ರಿಯಗಳನ್ನೂ ಬಿಗಿಹಿಡಿಯಬೇಕಾಗುವದು. ಈ ಇಂದ್ರಿಯ ನಿಗ್ರಹವು ಬಹು ಕಠಿಣವಾದದ್ದರಿಂದ ಬ್ರಹ್ಮಚರ್ಯಾಶ್ರಮವನ್ನು ಪಾಲಿಸುವದು ಬಹು ಕಠಿಣವಾಗಿರುವದು.

ಇಂದ್ರಿಯ ನಿಗ್ರಹ ಮಾಡಲಿಚ್ಛಿಸುವವನು ಆಹಾರ - ವಿಹಾರ -ವ್ಯವಹಾರಗಳಲ್ಲಿ ಮಿತಿಯುಳ್ಳವನಾಗಿರಬೇಕಾಗುವದು. ನಿಯಮಿತಾಹಾರ-ವಿಹಾರಗಳಿಂದ ಜ್ಞಾನೇಂದ್ರಿಯಗಳೂ, ನಿಯಮಿತ ವ್ಯವಹಾರದಿಂದ ಕರ್ಮೇಂದ್ರಿಯಗಳೂ ನಿಗ್ರಹಿಸಲ್ಪಡುವವು. ಗುರು ಹಿರಿಯರ, ಹಾಗು ಧರ್ಮದ ಆಜ್ಞೆಗಳನ್ನು ಪಾಲಿಸುವದರಿಂದ ಮನಸ್ಸು ನಿಗ್ರಹಿಸಲ್ಪಡುವದು

ಆಹಾರವೆಂದರೆ, ಪ್ರಾಮುಖ್ಯವಾಗಿ ಜ್ಞಾನೇಂದ್ರಿಯದ್ವಾರಾ ಆತ್ಮತೃಪ್ತ್ಯರ್ಥ ವಾಗಿ ಸೇವಿಸುವ ವಿಷಯುಗಳು. ಮೇಲೆ ಹೇಳಿದ ಕಣ್ಣು- ನಾಲಿಗೆ- ಮೂಗು- ಕಿವಿ- ಚರ್ಮ ಎಂಬ ಐದು ಜ್ಞಾನೇಂದ್ರಿಯುಗಳ ದ್ವಾರದಿಂದ ಸೇವಿಸುವ ರೂಪ-ರಸ-ಗಂಧ-ಶಬ್ದ-ಸ್ಪರ್ಶಗಳೂ ಆಯಾ ಇಂದ್ರಿಯುಗಳ ಆಹಾರಗಳಾಗಿ ರುವವು. ಈ ಐದು ಆಹಾರಗಳಲ್ಲಿಯೂ ಆತ್ಮತೃಪ್ತಿಯ ದೃಷ್ಟಿಯಿಂದಲೂ, ಶರೀರಪೋಷಣದದೃಷ್ಟಿಯಿಂದಲೂ ಜಿಹ್ವೇಂದ್ರಿಯವಿಷಯವಾದ ರಸವೆಂಬ ಆಹಾರವು ಮುಖ್ಯವಾಗಿರುವದರಿಂದ, ಅದನ್ನೇ ಆಹಾರವೆಂದು ಪ್ರಾಮು ಖ್ಯವಾಗಿ ರೂಢಿಯಲ್ಲಿ ಕರೆಯುವದುಂಟು. ಅನ್ನಗತ ಪ್ರಾಣವಾದುದರಿಂದ ಈ ಆಹಾರದ ಉಪಾಧಿಯು ಪ್ರಾಣಿಮಾತ್ರಗಳ ಬೆನ್ನು ಬಿಟ್ಟಿರುವದಿಲ್ಲ. ನಿರಾ ಹಾರದಿಂದಿರುವ ಪ್ರಾಣಿಯಿಂದ ಯಾವ ಕಾರ್ಯವೂ ಆಗದು. "ಮೊದಲು ಅನ್ನನ್ನ ಆಮೇಲೆ ತನ್ನನ್ನ" ಎಂಬ ಲೋಕೋಕ್ತಿಯಂತೆ, ಹೊಟ್ಟೆ ತುಂಬ ಆಹಾರ ದೊರೆತ ಬಳಿಕ ವಿಹಾರದ ಮಾತು. "ಅಂಬಳಿಕಂಬಳಿರಾಸ್ತ, ಹೆಚ್ಚಿನದು ಜಾಸ್ತ" ಎಂಬ ಗ್ರಾಮ್ಯೋಕ್ತಿಯಂತೆ ವಿಹಾರವು ಹೆಚ್ಚಿನದೆಂದು ಹೇಳಬಹುದು ; ಯಾಕಂದರೆ ಅದನ್ನು ಬಿಡುವದರಿಂದ ದೇಹಕ್ಕೆ ಉಪಹತಿ ಯಾಗುವದಿಲ್ಲ.

ವಿಹಾರವೆಂದರೆ, ಜ್ಞಾನೇಂದ್ರಿಯ ದ್ವಾರಾ ಆಹಾರ ಸೇವನದಿಂದಾಗುವ ಆನಂದವನ್ನು ಹೆಚ್ಚಿಸಿಕೊಳ್ಳುವ ಉಬ್ಬಿನಿಂದ ಇಂದ್ರಿಯಗಳು ವಿಶೇಷವಾಗಿ ಆಹಾರವನ್ನು ಸೇವಿಸುವಂತೆ ಮಾಡುವ ಕೃತ್ರಿಮ ಉಪಾಯವೆಂದು ಹೇಳ ಬಹುದು. ಜಲವಿಹಾರ, ವನವಿಹಾರ, ಜ್ಯೋತ್ಸ್ನಾವಿಹಾರ ಮೊದಲಾದವು ಗಳ ನೆವದಿಂದ ಪಂಚೇಂದ್ರಿಯುಗಳ ದ್ವಾರದಿಂದ ಉತ್ತೇಜಕಾಹಾರಗಳನ್ನು ಸೇವಿಸುವದು ವಿಹಾರದ ಉದಾಹರಣವಾಗಿರುವದು. ಒಟ್ಟಿಗೆ, ಆಹಾರದ ಒಂದು ಬಗೆಯ ಅತಿರೇಕವೇ ವಿಹಾರವೆಂದು ಹೇಳಬಹುದು. ವಿಹಾರವು ಅತಿಯಾದರೆ ಅಪಾಯ ತಟ್ಟುವ ಸಂಭವವುಂಟು. ಇನ್ನು ವ್ಯವಹಾರವೆಂ ದರೆ ಆಹಾರ-ವಿಹಾರಗಳ ಪ್ರಾಪ್ತ್ಯರ್ಥವಾಗಿಯೂ, ಪ್ರಾಪ್ತವಾಗಿದ್ದ ಆಹಾರ ವಿಹಾರಗಳ ಸುಪರಿಣಾಮವಾಗುವದಕ್ಕಾಗಿಯೂ ನಡೆಸುವ ಕರ್ಮೇಂದ್ರಿಯ ಪ್ರಧಾನವಾದ ವ್ಯಾಪಾರವೆಂದು ಹೇಳಬಹುದು. ಕೈ, ಕಾಲು, ಮಾತು

ಮೂತ್ರದ್ವಾರ, ಗುದದ್ವಾರ ಇವು ಕರ್ಮೇಂದ್ರಿಯಗಳೆಂದು ಹಿಂದೆ ಹೇಳಿಯದೆ. ಪ್ರಾಮುಖ್ಯವಾಗಿ ಈ ಕರ್ಮೇಂದ್ರಿಯಗಳ ದ್ವಾರದಿಂದ ಮಾಡುವ ಬಗೆಬಗೆಯ ಉದ್ಯೋಗಗಳು ಆಹಾರ - ವಿಹಾರಗಳ ಪ್ರಾಪ್ತ್ಯರ್ಥವಾಗಿ ಮಾಡುವ ವ್ಯವಹಾರಗಳಾಗಿರುವವು. ಅದರಂತೆ ವ್ಯಾಯಾಮ, ಅಂಗಸಾಧನೆ ಮುಂತಾದ ವ್ಯಾಪಾರಗಳು, ಪ್ರಾಪ್ತವಾದ ಆಹಾರ-ವಿಹಾರಗಳ ಸುಪರಿಣಾಮಕ್ಕಾಗಿನಡಿಸುವ ವ್ಯವಹಾರಗಳಾಗಿರುವವು. ಈ ಆಹಾರ-ವಿಹಾರ-ವ್ಯವಹಾರಗಳು ನಮಗೆ ಆಮರಣ ಅಪರಿಹಾರ್ಯವಾಗಿದ್ದರೂ, ಅವನ್ನು ಸತ್ಪರಿಣಾಮಕಾರಿಯಾಗಿಯಾಗಲಿ, ದುಷ್ಪರಿಣಾಮಕಾರಿಯಾಗಿಯಾಗಲಿ ಮಾಡಿಕೊಳ್ಳುವದು ನಮ್ಮ ಕೈಯಲ್ಲಿರುತ್ತದೆಂಬದನ್ನು ಮಾತ್ರ ನಾವು ಸರ್ವಥಾ ಮರೆಯಲಾಗದು. ಆಹಾರ- ವಿಹಾರ- ವ್ಯವಹಾರಗಳು ಸತ್ಪರಿಣಾಮಕಾರಿಗಳಾಗಬೇಕೆಂತಲೇ ನಮ್ಮ ಪೂರ್ವಜರು ವಿದ್ಯಾರ್ಥಿಗಳಿಗೆ ಗುರುಕುಲವಾಸದ ಯೋಗವನ್ನು ಒದಗಿಸಿಕೊಡುತ್ತಿದ್ದರು.

ಇಂದ್ರಿಯಗಳ ನಿಗ್ರಹಕ್ಕೆ ಗುರುಕುಲಗಳೇ ತಕ್ಕ ಸ್ಥಳಗಳೆಂಬದರಲ್ಲಿ ಸಂಶಯವಿಲ್ಲ; ಯಾಕಂದರೆ ಕುಲಪತಿಗಳಾದ ಋಷಿಗಳು ಇಂದ್ರಿಯ ನಿಗ್ರಹ ತತ್ಪರರಾಗಿದ್ದದ್ದರಿಂದ ಅವರ ಆಧಿಪತ್ಯದಲ್ಲಿ ವಿದ್ಯಾರ್ಥಿಗಳ ಆಹಾರ-ವಿಹಾರ-ವ್ಯವಹಾರಗಳಲ್ಲಿ ನೀತಿಯುಂಟಾಗಿ ಶಾಸ್ತ್ರಸಿದ್ಧವಾದ ಸಾತ್ವಿಕ ಆಹಾರ- ವಿಹಾರ- ವ್ಯವಹಾರಗಳಲ್ಲಿ ವಿದ್ಯಾರ್ಥಿಗಳು ತಮ್ಮ ಉಪಜೀವಿಕೆಯನ್ನು ಸಾಗಿಸುತ್ತ ತಾವೂ ತಪಸ್ವಿಗಳಾಗಿ ವಿದ್ಯಾಭ್ಯಾಸವನ್ನು ಮಾಡಬೇಕಾಗುತ್ತಿತ್ತು. ಇಂದ್ರಿಯಗಳಿಗೆ ರಾಜಸ ತಾಮಸ ಭಾವ ಆಹಾರ- ವಿಹಾರ- ವ್ಯವಹಾರಗಳು ದೊರೆಯದ್ದರಿಂದ ಅವುಗಳ ಕ್ಷೋಭವಾಗದೆ ಅವುಗಳ ಬೆಳವಣಿಗೆಗೆ ಆಸ್ಪದವು ದೊರೆಯುತ್ತಿತ್ತು. ಇಂದ್ರಿಯಗಳಕ್ಷೋಭದಿಂದ ಅವುಗಳ ಬೆಳವಣಿಗೆಗೂ, ಸತ್ವವೃದ್ಧಿಗೂ ಆತಂಕವುಂಟಾಗುವದು. ಈ ಮಾತನ್ನು ಲಕ್ಷದಲ್ಲಿಟ್ಟೇ ಕುಟುಂಬದಲ್ಲಿಯಾಗಲಿ, ಸಮಾಜದಲ್ಲಿಯಾಗಲಿ ನಡೆಯುವ ವಿವಿಧ ಆಹಾರ-ವಿಹಾರ-ವ್ಯವಹಾರಗಳ ಅಪಾಯಕಾರಕಸಂಪರ್ಕವು ಆಗಬಾರದೆಂದು ವಿದ್ಯಾರ್ಥಿಗಳನ್ನು ಮನೆಯಲ್ಲಿ ಇಟ್ಟುಕೊಳ್ಳದೆ ಗುರುಕುಲಕ್ಕೆ ಅಟ್ಟುತ್ತಿದ್ದರು; ಆದರೆ ಈಗ ಆ ಸಶಾಸ್ತ್ರೀಯ ಪದ್ಧತಿಯೆಲ್ಲ ಮಾಯವಾಗಿ. ವಿದ್ಯಾರ್ಥಿಗಳು

ಮನೆಯೊಳಗಿನ,ಹಾಗು ಸಮಾಜದೊಳಗಿನಅಶಾಸ್ತ್ರೀಯವಾದ,ಅತಏವ ಅಪಾಯಕಾರಕವಾದ ಆಹಾರ-ವಿಹಾರ-ವ್ಯವಹಾರಗಳಲ್ಲಿ ತೊಡಗಿ ಸತ್ವಹೀನರೂ, ಬಲಹೀನರೂ, ವೀರ್ಯಹೀನರೂ, ತೇಜೋಹೀನರೂ ಆಗಿ, ವಿವಿಧ ಮನೋವಿಕಾರಗಳ ಆಗರವಾಗುವರು. ಇಂತಹ ಪಾಮರರು ನಿರರ್ಥಕ ಗದ್ದಲವನ್ನಲ್ಲದೆ ಯಾವ ಮಹಾ ಕಾರ್ಯವನ್ನುಮಾಡಲು ಸಮರ್ಥರಾದಾರು? ಪಾಶ್ಚಿಮಾತ್ಯರ ಸಹವಾಸವಾದಾದಂತೆ, ನಮ್ಮಲ್ಲಿಯ ಗುರುಕುಲ ಪದ್ಧತಿಯ ಸ್ಮರಣವೂ ನಮಗೆಇಲ್ಲದಂತಾಗಿ, ಈಗಿನ ಶಾಲೆಗಳಲ್ಲಿಯ ಉದ್ದೇಶವಿಲ್ಲದ ಹಾಗು ಕಾರ್ಯಕಾರಿಯಲ್ಲದ ನಿರರ್ಥಕ ವಿಷಯಗಳ ಅರೆದಾಟದ ಅಭ್ಯಾಸದ ಕ್ರಮದಿಂದ ವಿದ್ಯಾರ್ಥಿಗಳ ಶಿಕ್ಷಣಕಾಲವು ಹಿತಪರ್ಯವಸಾಯಿಯಾಗದೆ, ವ್ಯರ್ಥವಾಗಿ ಕಳೆದುಹೋಗಲು, ಅವರು ಸತ್ವಹೀನರಾಗಿ ನೌಕರಿಯನ್ನಲ್ಲದೆ ಬೇರೆ ಕೆಲಸಗಳನ್ನು ಮಾಡಲು ಅಸಮರ್ಥರಾಗತೊಡಗಿದ್ದಾರೆ! ಈ ಸ್ಥಿತಿಯಲ್ಲಿ ಎಲ್ಲ ಉದ್ಯೋಗಗಳ ಗುತ್ತಿಗೆಯನ್ನು ಯಂತ್ರಕಲಾ ನಿಪುಣರಾದ ಪಾಶ್ಚಿಮಾತ್ಯರು ಹೊತ್ತುಬಿಡಲು, ಪ್ರಾಮುಖ್ಯವಾಗಿ ದೊಡ್ಡದೊಡ್ಡ ಪದವಿಗಳನ್ನು ಧರಿಸಿದವರು ನೌಕರಿಯು ಸಿಗದ ಹಾಗೆ ಆದಂತೆ ನಿರುದ್ಯೋಗಿಗಳೂ, ವಾಚಾಲರೂ, ದೀನರೂ ಆಗತೊಡಗಿರುವರು! ಆದರೂ ಪದವೀಧರರಾಗಿ ವ್ಯರ್ಥ ದುಡ್ಡು ಹಾಳುಮಾಡಿಕೊಳ್ಳುವ ಅಂಧಪರಂಪರೆಯು ನಮ್ಮ ಕೆಟ್ಟ ಚಟವೇನು ಹೋಗಲೊಲ್ಲದು; ಇದರಿಂದ ದೇಶವು ಹೆಚ್ಚು ಹೆಚ್ಚು ಪರಾಧೀನವಾಗುವದೂ ತಪ್ಪಲೊಲ್ಲದು!

ಈ ದುಸ್ಥಿತಿಯನ್ನು ನೋಡಿ ಪ್ರಾಮುಖ್ಯವಾಗಿ ಪದವೀಧರರ ಧೌರೀಣ್ಯದಲ್ಲಿ ದೇಶೋದ್ಧಾರಕ್ಕಾಗಿ ಯತ್ನಿಸುವ ದೇಶಭಕ್ತರದೊಂದು ಸಂಘವು ಉತ್ಪನ್ನವಾಯಿತು. ಅವರ ಮುಖ್ಯ ಕೆಲಸವೆಂದರೆ, ಧರ್ಮ-ಜಾತಿ-ಕುಲಗಳ ಅಭಿಮಾನವನ್ನು ಹಿಡಿಯದೆ, ಅವುಗಳ ಯಾವಬಂಧನಕ್ಕೂ ಕಾರ್ಯತಃ ಒಳಗಾಗದೆ, ವಿಶಿಷ್ಟ ಪ್ರಕಾರದ ವೇಷ - ಭೂಷಣ - ಭಾವಗಳುಳ್ಳವರಾಗಿ ಲೋಕಜಾಗ್ರತಿಯಾಗಬೇಕೆಂದು ವಿವಿಧ ವಿಷಯಗಳ ಮೇಲೆ ಪ್ರಾಚೀನ ಆರ್ಯ ಸಂಸ್ಕೃತಿಗೆ ಮಹತ್ವಕೊಡದೆ, ಪೂಜ್ಯ ಪುರಾತನರ, ಹಾಗು ಅವರ ವಿಚಾರಗಳ ಅವಹೇಲನವಾದರೂ ಲಕ್ಷಿಸದೆ, ತಮ್ಮ ಮನಸ್ಸಿಗೆ ಸಮರ್ಪ

ಕವಾಗಿ ತೋರಿದಂತೆ ಸಭೆ - ಸಭೆಗಳಲ್ಲಿ ಉಪನ್ಯಾಸಕೊಡುವದು, ಲೇಖ ಗಳನ್ನು ಬರೆಯುವದು ! ಇವರ ಈ ಪ್ರಯತ್ನದಿಂದ ದೇಶದಲ್ಲಿ ಹಿತ ಕಾರಕವಾದ ದೈವೀ ಜಾಗ್ರತಿಯಾಗುವದೋ, ಅಥವಾ ಅಹಿತಕಾರಕವಾದ ಆಸುರೀ ಜಾಗ್ರತಿಯಾಗುವದೋ ಎಂಬದನ್ನು ಅವರೇ ಬಲ್ಲರು. ಯಾವ ದೊಂದು ದೇಶದೊಳಗಿನ ಜನರು ತಮ್ಮಲ್ಲಿಯ ವಿವಿಧ ಉದ್ಯೋಗ ಗಳನ್ನು ಕರ್ತವ್ಯಬುದ್ಧಿಯಿಂದ ಉತ್ತಮರೀತಿಯಿಂದ ಕೈಮುಟ್ಟಿಮಾಡುವದೇ ದೇಶೋದ್ಧಾರದ ಸಾಧನವಾಗಿದ್ದು, ಅಂತಹ ಉದ್ಯೋಗದ ಗೊಡವೆಗೆ ಹೋಗದೆ, ಹಾಗೆ ಉದ್ಯೋಗಮಾಡುವವರ ಸಂಬಂಧವನ್ನೂ ಇಡದೆ, ಉಂಡ ದ್ದನ್ನೇ ಕಾರಿಕೊಳ್ಳುವಂತೆ ದೇಹಾತ್ಮವಾದಿತ್ವದ ಪಾಶ್ಚಿಮಾತ್ಯರ ವಿಚಾರಗ ಳನ್ನು ದೇಶವತುಂಬ ಹರಡುವದರಿಂದ ದೇಶದಲ್ಲಿ ಕುಂಭಕರ್ಣನಲ್ಲಿ ಉಂಟಾ ದಂತಹ ವಿನಾಶಕಾರಕ ಆಸುರೀಜಾಗ್ರತಿಯೇ ಉಂಟಾಗಬಹುದೆಂದು ತೋರುತ್ತದೆ; ಯಾಕಂದರೆ, ಲೋಕಜಾಗ್ರತಿಯಾದಂತೆ ಲೌಕಿಕರಲ್ಲಿ ಅಸಹಿ ಷ್ಣುತೆ, ಮಾತ್ಸರ್ಯ, ದಂಭ, ಔದ್ಧತ್ಯ, ಅನೇಕತ್ವ, ವಿವಿಧ ಪಂಗಡಗಳ ಹಾಗು ಮತಗಳ ಉತ್ಪತ್ತಿ ಇವು ಆಗುತ್ತಿರುವವು. ದಿನದಿನಕ್ಕೆ ಉಂಟಾಗು ತ್ತಿರುವ ವಿವಿಧ ಸಂಘಗಳಿಗಂತು ನಿಲುಗಡಿಯೇ ಇಲ್ಲ; ಆಯಾಸಂಘದವರು ತಮ್ಮ ತಮ್ಮ ಸಂಘಗಳಿಂದ ಹೊರಗಾದವರ ಸಂಬಂಧವಿಲ್ಲದಂತೆ ತಮ್ಮ ತಮ್ಮ ಸಂಘದಕೆಲಸ ಮಾಡುತ್ತಿರುವರು! ಅಂದರೆ ತರುಣ ಸಂಘದವರಿಗೆ ವೃದ್ಧರ ಸಂಬಂಧವಿಲ್ಲ, ಬ್ರಾಹ್ಮಣ ಸಂಘದವರಿಗೆ ಬ್ರಾಹ್ಮಣೇತರರ ಸಂಬಂಧವಿಲ್ಲ, ಬ್ರಾಹ್ಮಣೇತರಸಂಘದವರಿಗೆ ಬ್ರಾಹ್ಮಣರ ಸಂಬಂಧವಿಲ್ಲ. ಸ್ತ್ರೀಯರ ಸಂಘ ಗಳಿಗೆ ಪುರುಷರಸಂಬಂಧವಿಲ್ಲ, ಪುರುಷಸಂಘಗಳಿಗೆ ಸ್ತ್ರೀಯರಸಂಬಂಧವಿಲ್ಲ! ಇದರಿಂದ ಪರಸ್ಪರ ಸಂಬಂಧವಿಲ್ಲದಿರುವದು ಹೋಗಲಿ, ಪರಸ್ಪರ ದ್ವೇಷ ಉಂಟಾಗದಿದ್ದರೆ ಸಾಕಾಗಿದೆ! ಈ ಚಂದದಿಂದ ಲೋಕದಲ್ಲಿ ಅನೇಕತ್ವವು ಉಂಟಾಗುತ್ತಾ ನಡೆದಿರುವದಲ್ಲದೆ, ಇನ್ನುಮೇಲೆ ಅತ್ತೆಯರಸಂಘ, ಸೊಸೆ ಯರಸಂಘ, ಮಕ್ಕಳಸಂಘ, ತಂದೆಗಳಸಂಘ ಎಂಬ ಸುಂದರ ಸಂಘಗಳು ಉಂಟಾಗಿ ಮನೆತನಗಳೆಲ್ಲ ಹಾಳಾಗಿ ಹೋಗುವವೋ ಎಂಬ ಅಂಜಿಕೆಯು ಹುಟ್ಟಬಹುದಾಗಿದೆ. ಪಾಪ ! ದೇಶಭಕ್ತರು ಯತ್ನಿಸುವದು ದೇಶದ ಐಕ್ಯ

ಕ್ಕಾಗಿ; ಪರಿಣಾಮ ನೋಡಿದರೆ ಅನೈಕ್ಯ! ಇದಕ್ಕೆ ದೇಶದ ದುರ್ದೈವವನ್ನು ಮುಂದೆ ಮಾಡದಿದ್ದರೆ ಗತಿಯೇನು?

ಇಂತಹ ದೇಶೋದ್ಧಾರದ ಪಿಡಗು ವಿದ್ಯಾರ್ಥಿಗಳನ್ನು ಅಂಟಿಕೊಳ್ಳುತ್ತಿರುವದರಿಂದ ಆಗುವ ಅನರ್ಥವನ್ನು ವರ್ಣಿಸಲಿಕ್ಕೆ ಇಲ್ಲಿ ಸ್ಥಳಾನುಕೂಲತೆಯಿಲ್ಲ. ಇಷ್ಟು ದಿಗ್ದರ್ಶನವಾದದ್ದು ರಾಷ್ಟ್ರೀಯ-ಭವಿತವ್ಯತೆಯ ತರ್ಕಕ್ಕೆ ವಿಚಾರವಂತರಿಗೆ ಸಾಕಾಗಿರುವದು. ವಿದ್ಯಾರ್ಥಿಗಳು ರಾಷ್ಟ್ರೋದ್ಧಾರಕ್ಕೆ ಕಾರಣಗಳಾದ ವಿವಿಧ ಉದ್ಯೋಗಗಳಲ್ಲಿ ಕಾರ್ಯತಃ ಸೇರಿ ತಾವು ಕೈಕೊಂಡಿರುವ ಆಯಾ ಉದ್ಯೋಗಗಳಿಗೆ ಅವಶ್ಯವಾಗಿರುವ ಶಿಕ್ಷಣವನ್ನು ಪಡೆದು ನಿಜವಾದ ದೇಶೋದ್ಧಾರಮಾಡುವ ಅಧಿಕಾರವನ್ನು ಪಡೆಯದೆ, ಬರಿಯ ಬಾಯಿಪುರಾಣದ ವ್ಯವಹಾರದಲ್ಲಿ ಸೇರುವದು ಹೇಗೆ ಘಾತಕವೆಂಬದನ್ನೂ, ಅದಕ್ಕೆ ಅಂಗಭೂತವಾಗಿರುವ ವಿವಿಧ ಮಹತ್ವದ ವಿಷಯಗಳನ್ನೂ ಕುರಿತು "ವಿಧ್ಯಾರ್ಥಿ" ಅಥವಾ "ರಾಷ್ಟ್ರೀಯ ಭವಿತವ್ಯತಾ" ಎಂಬ ಪುಸ್ತಕದಲ್ಲಿ ವಿಸ್ತಾರವಾಗಿ ಬರೆಯಬೇಕೆಂದಿದ್ದೇನೆ. ನನ್ನ ಈ ಮನೋದಯವನ್ನು ಸದ್ಗುರು ಪ್ರಭಾವವು ಪೂರ್ಣಮಾಡಬೇಕು.



## ೧೦ ಪ್ರಬಂಧ ಶಿಕ್ಷಣ

ಇದು ಅತ್ಯುಪಯುಕ್ತವಾದ ಮಹತ್ವದ ಪುಸ್ತಕವು. ಪ್ರಾಥಮಿಕ ಶಾಲೆಗಳಲ್ಲಿಯ ಚಿಕ್ಕ ವಿದ್ಯಾರ್ಥಿಗಳಿಂದ ಟ್ರೇನಿಂಗ ಕಾಲೇಜದ ೩ನೇ ವರ್ಷದಲ್ಲಿಯ ಪ್ರೌಢ ವಿದ್ಯಾರ್ಥಿಗಳ ವರೆಗೆ ನಾನು ಪ್ರಬಂಧಗಳನ್ನು ಕಲಿಸುವಾಗ ಆದ ಅನುಭವದ ಸಹಾಯದಿಂದಲೂ, ನನ್ನ ಲೇಖನ ವ್ಯವಸಾಯದಲ್ಲಿ ಬಂದ ಅನುಭವದ ಸಹಾಯದಿಂದಲೂ ಇದನ್ನು ಬರೆಯತೊಡಗಿರುವೆನು. ಭಾಷೆಯ ಏಕೀಕರಣಕ್ಕೆ ಸಹಾಯವಾಗುವಂತೆ ಈ ಪುಸ್ತಕದ ರಚನೆಯಾಗುವಾಗ ಮೈಸೂರ ಕನ್ನಡಿಗರ ಗೌರವದ ಸಹಾಯವು ನನಗೆ ಅವಶ್ಯ ಬೇಕಾಗಿರುವದು. ಅಂತಹ ಸಹಾಯವು ಬೆಂಗಳೂರ ಹಾಗು ಮೈಸೂರ ಪಟ್ಟಣಗಳಲ್ಲಿಯ ಅನುಭವಿಕ ವಿದ್ವಾಂಸರಿಂದ ದೊರೆತೀತೆಂಬ ಆಶೆಯಿಂದ ಈ ಪುಸ್ತ

ಕವನ್ನು ಬೇಗನೆ ಇಲ್ಲಿ ಮುಗಿಸಬೇಕೆಂದು ಮಾಡಿದ್ದೇನೆ. ನನ್ನ ಆ ಪ್ರಬಂಧ ಶಿಕ್ಷಣ ಕ್ರಮದ ದಿಗ್ದರ್ಶನವನ್ನು ಉಪೋದ್ಘಾತ ರೂಪದಿಂದ ಇನ್ನು ಸ್ವಲ್ಪ ದರಲ್ಲಿ ಮಾಡುವೆನು.

## ಉಪೋದ್ಘಾತ

ಪ್ರಬಂಧ-ಶಿಕ್ಷಣದ ಮೊದಲನೆಯ ಮೆಟ್ಟು ವಾಕ್ಯರಚನೆಯನ್ನು ಕಲಿಸುವದಾಗಿರುತ್ತದೆ. ಕನ್ನಡಿಗರಿಗೆ ಕನ್ನಡವು ಜನ್ಮಭಾಷೆಯಾದದ್ದರಿಂದ ಅವರು ನೆರೆಹೊರೆಯವರ ಅನುಕರಣಮಾಡಿ ಚಿಕ್ಕಂದಿನಿಂದಲೇ ವಾಕ್ಯರಚನೆಯನ್ನು, ಅಂದರೆ ಮಾತಾಡುವದನ್ನು ಕಲಿಯುತ್ತ ಬರುವರು; ಹೊರತು ವಿದ್ಯಾರ್ಥಿಗಳು ಶಾಲೆಯಲ್ಲಿ ಕಲಿಯುವಾಗ ಅವರು ಆಡುವ ಮಾತುಗಳನ್ನೂ, ಕೊಡುವ ಉತ್ತರಗಳನ್ನೂ ಶಿಕ್ಷಕರು ಬಾಲಕರ ವರ್ಗದಿಂದಲೇ ತಿದ್ದುತ್ತ ಬರಬೇಕಾಗುವದು. ಅಂದಬಳಿಕ ಕೂಸುಗಳು ಮನೆಯಲ್ಲಿ ಮಾತಾಡಲಿಕ್ಕೆ ಹತ್ತಿದಾಗಿನಿಂದಲೂ, ಮುಂದೆ ಅವು ದೊಡ್ಡವಾಗಿ ಶಾಲೆಯಲ್ಲಿ ಬಾಲಕವರ್ಗಕ್ಕೆ ಸೇರಿದಾಗಿನಿಂದಲೂ ಪ್ರಬಂಧ ಶಿಕ್ಷಣವು ಒಂದು ಬಗೆಯಾಗಿ ಆರಂಭವಾಗುತ್ತದೆಂದು ಹೇಳಬಹುದು; ಆದರೆ ಮನೆಯಲ್ಲಿ ಹಿರಿಯರು ಹುಡುಗರಿಗೆ ಕಥೆಗಳನ್ನು ಹೇಳಿ ಪ್ರಬಂಧ ಶಿಕ್ಷಣವನ್ನು ಪ್ರತ್ಯಕ್ಷವಾಗಿ ಆರಂಭಿಸುವಂತೆ, ಶಾಲೆಯಲ್ಲಾದರೂ ಶಿಕ್ಷಕರು ಮಾಡಬೇಕು.

ಈ ಪ್ರಬಂಧ ಶಿಕ್ಷಣದ ಕೆಲಸವು ಬಹು ಸಾವಕಾಶವಾಗಿ ಸಾಗತಕ್ಕದ್ದೆಂಬದನ್ನು ಶಿಕ್ಷಕರು ಮರೆಯತಕ್ಕದ್ದಲ್ಲ. ಸಣ್ಣ ಹುಡುಗರ ಸಂಬಂಧದಿಂದಂತು ತಾಳ್ಮೆಯು ಬಹಳ ಬೇಕಾಗುವದು. ಉದಾಹರಣಾರ್ಥ—ಮೊದಲು ಚಿಕ್ಕ ಮಕ್ಕಳು ಕಥೆಗಳನ್ನು ಅಕ್ಕರತೆಯಿಂದ ಕೇಳುವವು ಮಾತ್ರ; ಅವಕ್ಕೆ ಕೇಳಿದ್ದನ್ನು ಸ್ವಲ್ಪವೂ ಹೇಳಲಿಕ್ಕೆ ಬರುವದಿಲ್ಲ. ಮುಂದೆ ಬರಬರುತ್ತ ಅವು ಸ್ವಲ್ಪಸ್ವಲ್ಪ ಹೇಳತೊಡಗುವವು. ಕೇಳಿದ್ದನ್ನು ನೆಟ್ಟಗೆ ಹೇಳಲಿಕ್ಕೆ ಬಂದರೆ ತಕ್ಕಮಟ್ಟಿಗೆ ಕೆಲಸವಾದಂತಾಗುವದು. ಇಷ್ಟಾದ ಬಳಿಕ ಕೈಮುಟ್ಟಿ ಬರೆಯುವದು. ಬಾಲಕರ ವರ್ಗದಿಂದ ೩ನೆಯ ಇಯತ್ತೆಯ ವರೆಗಿನ ವಿದ್ಯಾರ್ಥಿಗಳಿಗೆ ಬರೆಯುವ ಅಭ್ಯಾಸವಿರುವದಿಲ್ಲ; ಆದ್ದರಿಂದ ಅವರು ಕಥೆ ಮೊದಲಾದವನ್ನು ತಮ್ಮತಮ್ಮ ಯೋಗ್ಯತೆಯಂತೆ ಬಾಯಿಂದ

ಹೇಳಿದರಾಯಿತು. ನಾಲ್ಕನೆಯ ಇಯತ್ತೆಯ ವಿದ್ಯಾರ್ಥಿಗಳಿಗೆ ಕೆಲಮಟ್ಟಿಗೆ ಬರೆಯುವ ಅಭ್ಯಾಸವಾಗುವ ಕಾರಣ, ಅವರು ತಾವು ಬಾಯಿಂದ ಹೇಳುವವನ್ನು ಅನುಕೂಲವಿದ್ದರೆ ಬರೆಯುವದು ಹಿತಕರವು. ೫ನೆಯ ಇಯತ್ತೆಯ ವಿದ್ಯಾರ್ಥಿಗಳಿಗೆ ತಕ್ಕಮಟ್ಟಿಗೆ ಬರೆಯುವ ಅಭ್ಯಾಸವಾಗುವದಲ್ಲದೆ, ಅಲ್ಪಸ್ವಲ್ಪ ವ್ಯಾಕರಣ ಜ್ಞಾನವೂ ಆಗುವದರಿಂದ, ಪ್ರಬಂಧ ಶಿಕ್ಷಣವನ್ನು ೫ನೆಯ ಇಯತ್ತೆಯಿಂದ ಸ್ವತಂತ್ರವಾಗಿ ಆರಂಭಿಸತಕ್ಕದ್ದು.

ಶುದ್ಧಭಾಷೆಯನ್ನು ಕೈಸೇರಿಸಿಕೊಳ್ಳಲಿಕ್ಕೆ ವಿದ್ಯಾರ್ಥಿಗಳಿಗೆ ನೆರವಾಗುತ್ತ ಹೋಗುವದು,ಪ್ರಬಂಧಶಿಕ್ಷಣದ ಸಂಬಂಧದಿಂದ ಶಿಕ್ಷಕರು ಮಾಡತಕ್ಕ ಅವಶ್ಯದ ಕೆಲಸವಾಗಿರುವದು. ಈ ಕೆಲಸವನ್ನು ಅವರು ಜಾಗರೂಕತೆಯಿಂದ ಮಾಡದಿದ್ದರೆ ಹಾನಿ ತಪ್ಪದೆ ಇರದು. ಸಣ್ಣ ಸಣ್ಣ ವಾಕ್ಯಗಳನ್ನು ರಚಿಸುವದು ಮನುಷ್ಯನಿಗೆ ಸ್ವಾಭಾವಿಕವಾದದ್ದೆಂಬದನ್ನು ಶಿಕ್ಷಕರು ಎಂದೂ ಮರೆಯತಕ್ಕನ್ನದಲ್ಲ. ಈ ಸ್ವಭಾವದ ಅಂಕುರಾರೋಪಣವು ಮನುಷ್ಯನ ಹೃದಯದಲ್ಲಿ ತಾಯಿತಂದೆಗಳ ಪ್ರೀತಿಯ ಮಾತಿನರೂಪದಿಂದ ಚಿಕ್ಕಂದಿನಿಂದಲೇ ಆಗುತ್ತಿರುವದು. ಈ ಅಂಕುರವನ್ನು ಶಿಕ್ಷಕರು ಕ್ರಮವಾಗಿ ಬೆಳೆಯಗೊಟ್ಟು ದೊಡ್ಡಗಿಡವಾಗಮಾಡಬೇಕಾಗುವದು. ಇದಕ್ಕಾಗಿ ಅವರು ವಿದ್ಯಾರ್ಥಿಗಳ ಯೋಗ್ಯತೆಯನ್ನರಿತು ಮೆಲ್ಲಮೆಲ್ಲನೆ ಅವರ ಭಾಷೆಯನ್ನು ಶುದ್ಧಗೊಳಿಸುತ್ತ, ತಕ್ಕ ಹೊಸಶಬ್ದಗಳ ಪೂರಯಿಕೆಯನ್ನು ಅವರಿಗೆ ಮಾಡಿಕೊಡುತ್ತ ಸಾಗಬೇಕಾಗುವದು. ಅಪ್ರಾಸಂಗಿಕವಾದ ಕಠಿಣಶಬ್ದಗಳ ಪ್ರಯೋಗಕ್ಕೆ ಅವರು ಆಸ್ಪದ ಕೊಡತಕ್ಕದ್ದಲ್ಲ. "ಮತ್ತು" "ಆದರೆ" ಮುಂತಾದ ಸಮುಚ್ಚಾಯಕಾವ್ಯಯಗಳನ್ನು ಅರ್ಥವರಿಯದೆ ಸಿಕ್ಕಹಾಗೆ ಉಪಯೋಗಿಸಗೊಡುವದೂ ಸರಿಯಲ್ಲ. ಗೊತ್ತಿಲ್ಲದ ಅಲಂಕಾರದ ಸಮೀಪಕ್ಕೆ ಹೋಗದಂತೆ ಅವರು ವಿದ್ಯಾರ್ಥಿಗಳನ್ನು ತಡೆಯತಕ್ಕದ್ದು. ಈ ನಿರ್ಬಂಧವನ್ನು ಪಾಲಿಸಲಿಕ್ಕೆ ಸಹಾಯವಾಗಬೇಕೆಂದು, ಈ ಪುಸ್ತಕದಲ್ಲಿ ಮುಂದೆ ಮಾದರಿಗಾಗಿ ಕೊಡುತ ಹೋಗಿರುವ ಲೇಖಗಳು ಬೀಜದಿಂದ ವೃಕ್ಷವೆಂಬ ಕ್ರಮದಂತೆ ಬರೆದು ತೋರಿಸಲ್ಪಟ್ಟಿರುತ್ತವೆ.

ಶುದ್ಧಭಾಷೆಗಿಂತ ಸಮರ್ಪಕ-ವಿಷಯ-ವಿವೇಚನವು ಲೇಖಕನ ಗೌರವವನ್ನು ಹೆಚ್ಚಿಸುತ್ತದೆಂದು ತಿಳಿಯಬೇಕು. ವಿಷಯವನ್ನು ಸರಿಯಾಗಿ

ವಿವೇಚಿಸಲಿಕ್ಕೆ ಕಲಿಸುವದೇ ಪ್ರಬಂಧಶಿಕ್ಷಣದ ಮುಖ್ಯೋದ್ದೇಶವಾಗಿರುತ್ತದೆ. ಅಂದಬಳಿಕ ವಿದ್ಯಾರ್ಥಿಗಳಿಗೆ ಬರೆಯಲಿಕ್ಕೆ ತಕ್ಕವಿಷಯಗಳನ್ನು ಒದಗಿಸಿಕೊಡುವದು ಶಿಕ್ಷಕರ ಮುಖ್ಯಕೆಲಸವಾಯಿತು. ಯಾವ ಸಂಬಂಧವೂ ಇಲ್ಲದೆ ಬಾಯಿಗೆ ಬಂದವಿಷಯವನ್ನು ಬರೆಯಹೇಳುವದರಿಂದ ವಿಶೇಷ ಪ್ರಯೋಜನವಾಗುವದಿಲ್ಲ. ಶಿಕ್ಷಕರು ಬರೆಯಹೇಳುವ ವಿಷಯಗಳಿಂದ ವಿದ್ಯಾರ್ಥಿಗಳ ಹಿತವು ಹಲವುಬಗೆಗಳಿಂದ ಆಗುವಂತೆ ಇರಬೇಕು; ಅಂದರೆ ಅವು, "ಸುಲಭದಿಂದ ಕಠಿಣಕ್ಕೆ ಹೋಗಬೇಕೆಂಬ" ಶಿಕ್ಷಣದ ತತ್ವವನ್ನು ಅನುಸರಿಸಿರಬೇಕು; ಮನೋರಂಜಕವಾಗಿರಬೇಕು; ವಿದ್ಯಾರ್ಥಿಗಳ ಜ್ಞಾನವನ್ನೂ, ನೀತಿಯನ್ನೂ ಬೆಳಿಸಲಿಕ್ಕೆ ಸಹಾಯಮಾಡುವಂಥವಿರಬೇಕು. ಇವೆಲ್ಲ ಉದ್ದೇಶಗಳು ಕೊನೆಗಾಣುವಂತೆ ವಿಷಯಗಳನ್ನು ಕೊಡಲಿಕ್ಕೆ ಈ ಪುಸ್ತಕದಲ್ಲಿ ಕೈಲಾದಷ್ಟು ಯತ್ನಿಸಿರುತ್ತದೆ; ಮತ್ತು ತಕ್ಕ ವಿಷಯಗಳನ್ನು ವಿಪುಲವಾಗಿ ಒದಗಿಸಿಕೊಟ್ಟಿರುವದಲ್ಲದೆ, ಆ ವಿಷಯಗಳ ವಿವೇಚನ ಕ್ರಮವನ್ನೂ, ಆ ಕ್ರಮವನ್ನನುಸರಿಸಿ ಬರೆದ ಲೇಖಗಳ ಉದಾಹರಣಗಳನ್ನೂ, ಆಮೇಲೆ ಹುಡುಗರ ಅಭ್ಯಾಸಕ್ಕಾಗಿ ಅಂತಹ ಹಲವು ಹೊಸವಿಷಯಗಳನ್ನೂ ಕೊಟ್ಟಿರುತ್ತದೆ. ಅದು ಹೇಗೆಂಬದನ್ನು ಸ್ವಲ್ಪದರಲ್ಲಿ ಕೆಳಗೆ ಹೇಳಿರುವದು.

**ವಿಷಯುಗಳು**—ನಿಬಂಧದ ವಿಷಯಗಳು ಇಂತಹವೇ ಎಂದು ಹೇಳಲಿಕ್ಕಾಗುವದಿಲ್ಲ; ಊಟ-ಉಡಿಗೆಗಳಿಂದ ಆರಂಭವಾಗಿ, ಗಂಭೀರವಾದ ತತ್ವವಿಚಾರದವರೆಗೆ ಬರುವ ವಿಷಯಗಳೆಲ್ಲ ನಿಬಂಧದ ವಿಷಯಗಳೇ ಆಗಿರುತ್ತವೆ. ಗಂಭೀರವಾದ ತತ್ವವಿಚಾರಗಳನ್ನು ದೊಡ್ಡ ದೊಡ್ಡ ಲೇಖಕರು ಮಾತ್ರ ಬರೆಯಬಹುದಾಗಿದ್ದರೂ, ಊಟ-ಉಡಿಗೆಯಂತಹ ಅನುಭವದ ವಿಷಯಗಳು ಹುಡುಗರಿಂದ ಪ್ರಬುದ್ಧ ಪ್ರಬಂಧಕಾರರವರೆಗೆ ಬರೆಯಲು ತಕ್ಕವಾಗಿರುವವು. ಇಂತಹ ಸುಲಭವಿಷಯಗಳ ವಿವೇಚನವು ಲೇಖಕನ ಯೋಗ್ಯತೆಯಂತೆ ಗೌರವದ್ದಾಗುವದು. ಪ್ರಬಂಧಲೇಖನಕ್ಕೆ **ಅನುಭವ, ವಿಚಾರ** ಇವು ಅವಶ್ಯವಾಗಿರುವವು. ಇವಕ್ಕೆ **ಪ್ರಯತ್ನವು** ಜೋಡಾಗದಿದ್ದರೆ ಪ್ರಬಂಧ-ಲೇಖನದಲ್ಲಿ ಪ್ರಗತಿಯು ಆಗಲಾರದು. ಅನುಭವ—ವಿಚಾರಗಳನ್ನು ಹೆಚ್ಚಿಸಿಕೊಂಡು ಅವನ್ನು ಕಾರ್ಯಕ್ಷಮವಾಗಿ ಮಾಡಿಕೊಳ್ಳ

ಲಿಕ್ಕೆ ಪ್ರಯತ್ನವು ಬೇಕೇಬೇಕು. ಅನುಭವ-ವಿಚಾರಗಳನ್ನು ಪ್ರಯತ್ನ ಪೂರ್ವಕವಾಗಿ ಹೆಚ್ಚಿಸಿಕೊಂಡು ಅವನ್ನು ಬೇಕಾದಹಾಗೆ ಉಪಯೋಗಿಸುವವರು ಉತ್ತಮ ಲೇಖಕರು. ಪ್ರಯತ್ನ ಪೂರ್ವಕವಾಗಿ ಅನುಭವವೊಂದನ್ನೇ ಹೆಚ್ಚಿಸಿಕೊಂಡು ಅದನ್ನು ಉಪಯೋಗಿಸುವವರು ಮಧ್ಯಮ ಲೇಖಕರು. ಪ್ರಯತ್ನ ಮಾಡಲಾರದೆ ಅನುಭವವನ್ನೂ ಸರಿಯಾಗಿ ಉಪಯೋಗಿಸಲಾರದವರು ಕನಿಷ್ಠರು. ಈ ಮಾತನ್ನು ಲಕ್ಷದಲ್ಲಿಟ್ಟು ಈ ಪುಸ್ತಕದಲ್ಲಿ ಕನಿಷ್ಠ ಪ್ರತಿಯವರಿಂದ ಉತ್ತಮ ಪ್ರತಿಯ ಪ್ರಬಂಧಕಾರರವರೆಗೆ ಪ್ರಬಂಧ ಕಲಿಸುವದಕ್ಕಾಗಿ ನಾಲ್ಕು ಭಾಗಗಳನ್ನು ಮಾಡಿರುತ್ತದೆ. ೧ನೆಯ ಭಾಗದಲ್ಲಿ ಬಾಲಕರ ವರ್ಗದಿಂದ ೫ನೆಯ ಇಯತ್ತೆಯವರೆಗಿನ ವಿದ್ಯಾರ್ಥಿಗಳಿಗೆ ಅವರವರ ಯೋಗ್ಯತೆಯಂತೆ, ಅರಮಾತು-ಹುಟ್ಟುಮಾತು-ಸುಲಭಮಾತುಗಳಿಂದ ಅನುಭವಸಾಧ್ಯ ವಿಷಯಗಳ ಪ್ರಬಂಧಗಳನ್ನು ಬೀಜರೂಪ-ಅಂಕುರರೂಪವಾದ ಶಿಕ್ಷಣದಿಂದ ಕಲಿಸಿರುತ್ತದೆ. ೨ನೆಯ ಭಾಗದಲ್ಲಿ ೬ನೆಯ ಇಯತ್ತೆಯವರಿಗೆ ಶುದ್ಧಮಾತಿನಿಂದ ಅನುಭವ ಸಾಧ್ಯವಿಷಯಗಳ ಪ್ರಬಂಧಗಳನ್ನು ಸಸ್ಯರೂಪ ಶಿಕ್ಷಣದಿಂದ ಕಲಿಸಿರುತ್ತದೆ. ೩ನೆಯ ಭಾಗದಲ್ಲಿ ೭ನೆಯ ಇಯತ್ತೆಯವರಿಗೂ, ಮುಂದಿನವರಿಗೂ ಕಠಿಣವಾದ ಅನುಭವಸಾಧ್ಯ ವಿಷಯಗಳ ಪ್ರಬಂಧಗಳನ್ನೂ, ಸುಲಭವಾದ ವಿಚಾರಸಾಧ್ಯ ವಿಷಯಗಳ ಪ್ರಬಂಧಗಳನ್ನೂ ಸವಿಮಾತಿನಿಂದ ವೃಕ್ಷರೂಪ ಶಿಕ್ಷಣದಿಂದ ಕಲಿಸಿರುತ್ತದೆ. ಕಡೆಯ ನಾಲ್ಕನೆಯ ಭಾಗದಲ್ಲಿ ಹೆಚ್ಚಿನ ಯೋಗ್ಯತೆಯವರಿಗಾಗಿ ಪ್ರೌಢ ಭಾಷೆಯಿಂದ ವಿಚಾರಸಾಧ್ಯ ವಿಷಯಗಳ ಪ್ರಬಂಧಗಳನ್ನು ಫಲರೂಪ ಶಿಕ್ಷಣದಿಂದ ಕಲಿಸಿರುತ್ತದೆ. ಅಲ್ಲದೆ, ಈ ಭಾಗದಲ್ಲಿ ಪ್ರಬಂಧಗಳಿಗೂ, ಲೇಖಗಳಿಗೂ ಇರುವ ಭೇದವನ್ನು ಹೇಳಿ, ಕೆಲವು ಲೇಖಗಳನ್ನು ಬರೆದುತೋರಿಸಿರುತ್ತದೆ.

**ವಿವೇಚನ ಕ್ರಮ**— ತಕ್ಕ ವಿಷಯಗಳನ್ನು ಕೊಟ್ಟ ಮಾತ್ರದಿಂದ ವಿದ್ಯಾರ್ಥಿಗಳು ಅವನ್ನು ಸರಿಯಾಗಿ ವಿವೇಚಿಸಲಾರರು. ಬರೆಯುವ ಕ್ರಮವು ಗೊತ್ತಿಲ್ಲದ್ದರಿಂದಲೂ, ತಮಗಾಗಿದ್ದ ಅನುಭವವನ್ನು ಒಟ್ಟುಗೂಡಿಸುವ ಅಭ್ಯಾಸವಿಲ್ಲದ್ದರಿಂದಲೂ, ಪ್ರಯತ್ನದ ದಾರಿಯು ಗೊತ್ತಾಗದ್ದರಿಂದಲೂ,

ವಿಚಾರದ ದಿಸೆಯು ತಿಳಿಯದ್ದರಿಂದಲೂ ಅವರಿಗೆ ಪರರ ಸಹಾಯವು ಅವಶ್ಯವಾಗಿ ಬೇಕಾಗುವದು; ಆದ್ದರಿಂದ ಈ ಪುಸ್ತಕದೊಳಗಿನ ನಾಲ್ಕೂ ಭಾಗಗಳಲ್ಲಿ ಕಲಿಸಬೇಕಾಗಿರುವ ಪ್ರಬಂಧದ ವಿಷಯುಗಳಿಗಾಗಿ ಬೇರೆ ಬೇರೆ ಪಾಠಗಳನ್ನು ಕಲ್ಪಿಸಿರುತ್ತದೆ; ಮತ್ತು ೭ನೆಯ ಇಯತ್ತೆಯವರಿಂದ ಮುಂದೆ ಅಂದರೆ ೭ನೆಯ, ೩ನೆಯ, ೪ನೆಯ ಭಾಗಗಳಲ್ಲಿ ಬೇರೆ ಬೇರೆ ಬಗೆಯ ವಿಷಯುಗಳನ್ನು ಹೇಗೆ ಹೇಗೆ ಬರೆಸಬೇಕೆಂಬದನ್ನು ಕುರಿತು ವಿಚಾರಮಾಡಿರುತ್ತದೆ. ವಿದ್ಯಾರ್ಥಿಗಳಿಗೆ ವಿಷಯ-ವಿವೇಚನ-ಕ್ರಮವು ಗೊತ್ತಾಗುವದಕ್ಕಾಗಿ ಪ್ರತಿ ಒಂದು ಪಾಠದ "**ವಿವೇಚನಕ್ರಮ**" ವೆಂಬ ಮೊದಲನೆಯ ಸದರಿನ ಕೆಳಗೆ ಆ ಪಾಠದೊಳಗಿನ ವಿಷಯದಲ್ಲಿ ಮಾಡಬಹುದಾದ ಮುಖ್ಯ ಭಾಗಗಳನ್ನು ಬರೆದಿರುತ್ತದೆ; ಮತ್ತು ಆಯಾ ಭಾಗಗಳ ಮುಂದೆ ಅವುಗಳಲ್ಲಿ ಸೇರಿಸಬಹುದಾದ ಮುಖ್ಯ ಮುಖ್ಯ ಸಂಗತಿಗಳನ್ನು ಕಾಣಿಸಿರುತ್ತದೆ.

**ಉದಾಹರಣ**—ಮಾದರಿಗಾಗಿ ಪ್ರಬಂಧಗಳನ್ನು ಬರೆದು ತೋರಿಸದೆ ಬರಿಯ ವಿವೇಚನ ಕ್ರಮವನ್ನಷ್ಟು ತಿಳಿಸಿ ಬಿಟ್ಟರೆ ಆಗತಕ್ಕಷ್ಟು ಪ್ರಯೋಜನವಾಗುವದಿಲ್ಲ. ಬರಹದ ಸುಲಭವಾದ ಸರಣಿ, ತಕ್ಕ ಪದ್ಧತಿ, ಸಣ್ಣ ಸಣ್ಣ ವಾಕ್ಯಗಳು, ವಿಷಯವನ್ನು ಹೊಂದಿಕೆಯಾಗಿ ಬರೆಯುವ ರೀತಿ, ಆಯಾ ಪಾಠಗಳಲ್ಲಿ ತೋರಿಸಿರುವ ವಿವೇಚನ ಕ್ರಮದ ಮಹತ್ವ ಇವನ್ನು ಅರಿತುಕೊಂಡು ಮನನಮಾಡಿಕೊಳ್ಳಲಿಕ್ಕೆ ವಿದ್ಯಾರ್ಥಿಗಳು ಮಾದರಿಯ ಲೇಖಗಳನ್ನು ಕಣ್ಣುಮುಟ್ಟಿ ನೋಡುವದು ಅವಶ್ಯವು; ಆದ್ದರಿಂದ ಪ್ರತಿ ಒಂದು ಪಾಠದಲ್ಲಿ "**ಉದಾಹರಣ**" ಎಂಬ ಎರಡನೆಯ ಸದರಿನ ಕೆಳಗೆ ಮಾದರಿಗಾಗಿ ಒಂದೊಂದು ಲೇಖವನ್ನು, ಕೆಲಕೆಲವು ಪಾಠಗಳಲ್ಲಿ ಎರಡೆರಡು ಲೇಖಗಳನ್ನು ಪ್ರತ್ಯಕ್ಷ ಬರೆದು ತೋರಿಸಿರುತ್ತದೆ.

**ಅಭ್ಯಾಸ**—ವಿದ್ಯಾರ್ಥಿಗಳಿಗೆ ಅಭ್ಯಾಸಕ್ಕಾಗಿ ಬರೆಯಲು ಹಲವು ವಿಷಯಗಳನ್ನು ಒದಗಿಸಿಕೊಡುವದು ಅವಶ್ಯವು. ಅಭ್ಯಾಸದ ಹೊರತು ವಿದ್ಯೆಯಾಗಲಿ, ಕಲೆಯಾಗಲಿ ಕೈಸೇರುವದಿಲ್ಲ; ಕಾರಣ ವಿದ್ಯಾರ್ಥಿಗಳ ಅಭ್ಯಾಸಕ್ಕೆ ವಿಷಯಗಳು ಅನಾಯಾಸವಾಗಿ ದೊರೆಯಬೇಕೆಂದು ಪ್ರತಿ ಒಂದು ಪಾಠದಲ್ಲಿ "**ಅಭ್ಯಾಸ**" ವೆಂಬ ಮೂರನೆಯ ಸದರಿನಮುಂದೆ ಮಾದರಿಯ

ಪಾಠದ ವಿಷಯವನ್ನು ಹೋಲುವಂತಹ ಅನೇಕ ವಿಷಯಗಳನ್ನು ಕೊಟ್ಟಿರುತ್ತದೆ.

**ಶಿಕ್ಷಕರ ಸಹಾಯ**—ಆಯಾಪಾಠಗಳಲ್ಲಿ ಕೊಟ್ಟಿರುವವಿಷಯ ವಿವೇಚನ ಕ್ರಮದಿಂದಲೂ, ಬರೆದು ತೋರಿಸಿದ ಮಾದರಿಯ ಲೇಖಗಳಿಂದಲೂ ಹೊಸ ವಿಷಯಗಳನ್ನು ಕುರಿತು ಬರೆಯುವಾಗ ವಿದ್ಯಾರ್ಥಿಗಳಿಗೆ ಸಹಾಯವಾಗಬೇಕೆಂದು ಶಿಕ್ಷಕರು ಅವರಿಗೆ ತಕ್ಕ ಸಹಾಯಮಾಡಬೇಕು. ಅವರು ವಿದ್ಯಾರ್ಥಿಗಳಿಂದ ಹೊಸದಾಗಿ ಬರೆಸತಕ್ಕ ಅಭ್ಯಾಸದ ವಿಷಯವನ್ನು ಕುರಿತು ವಿಷಯ ವಿವೇಚನ ಕ್ರಮವನ್ನನುಸರಿಸಿ ವಿದ್ಯಾರ್ಥಿಗಳೊಡನೆ ಚರ್ಚಿಸಬೇಕು. ವರ್ಗದಲ್ಲಿ ಒಬ್ಬ ವಿದ್ಯಾರ್ಥಿಯನ್ನೇ ಕೇಳುತ್ತಾ ಕುಳಿತುಕೊಳ್ಳದೆ, ಆ ವಿಷಯವನ್ನು ಕುರಿತು ಸಾಮಾನ್ಯವಾಗಿ ಎಲ್ಲರೊಡನೆ ಚರ್ಚಿಸಬೇಕು. ಹೀಗೆ ಮಾಡುವಾಗ ಬೇರೆಬೇರೆ ಹುಡುಗರಿಂದ ಬೇರೆಬೇರೆ ಅನುಭವಗಳು ಬೈಲಿಗೆ ಬಂದು, ಅವು ಒಟ್ಟುಗೂಡುವವು. ಈ ಅನುಭವಗಳನ್ನೆಲ್ಲ ನಾವೇ ಒಟ್ಟುಗೂಡಿಸಿದೆವೆಂಬ ಅಭಿಮಾನವು ವಿದ್ಯಾರ್ಥಿಗಳಲ್ಲಿ ಹುಟ್ಟುವದು. ಈ ಅಭಿಮಾನವು ಸ್ವಾವಲಂಬನದ ಅಭಿವೃದ್ಧಿಗೆ ಬಹು ಪ್ರಯೋಜನಕರವಾದದ್ದು. ಇನ್ನು, ಶಿಕ್ಷಕರು ಅವಶ್ಯದ ಸಂಗತಿಗಳನ್ನು ತಾವಾಗಿ ವಿದ್ಯಾರ್ಥಿಗಳಿಗೆ ಹೇಳಬಾರದೆಂತಲ್ಲ, ಚರ್ಚೆಯ ಓಘದಲ್ಲಿ ಅವರು ಅವನ್ನು ಅವಶ್ಯವಾಗಿ ಹೇಳತಕ್ಕದ್ದು. ತಾತ್ಪರ್ಯವಿಷ್ಟೇ ಈ ಪ್ರಸಂಗದಲ್ಲಿ ಶಿಕ್ಷಕರು ಹೊಸವಿಷಯಗಳನ್ನು ಹೇಳುವ ಪದ್ಧತಿಗಿಂತ, ಹುಡುಗರ ಅನುಭವಕ್ಕೆ ಬಂದಿದ್ದ ಸಂಗತಿಗಳನ್ನು ನೆನಪಿಗೆ ತಂದುಕೊಡುವ ಪದ್ಧತಿಯನ್ನು ವಿಶೇಷವಾಗಿ ಅನುಸರಿಸತಕ್ಕದ್ದು; ಅಂದರೆ ಹೊಸ ವಿಷಯಗಳನ್ನು ಕುರಿತು ಪ್ರಬಂಧ ಬರೆಯುವಮಾರ್ಗವು ಹುಡುಗರಿಗೆ ಗೊತ್ತಾಗುತ್ತ ಹೋಗುವದು.

ದಿಗ್ದರ್ಶನಕ್ಕಾಗಿ ಇಷ್ಟು ತಿಳಿಸಿದ್ದು ಸಾಕಾಗಬಹುದು. ಪ್ರಬಂಧ ಶಿಕ್ಷಣದಲ್ಲಿ ಬರತಕ್ಕ ವಿಷಯಗಳೆಲ್ಲ ತಟ್ಟನೆ ಕಣ್ಣಿಗೆ ಕಟ್ಟುವದಕ್ಕಾಗಿ ಪ್ರಬಂಧ-ವೃಕ್ಷವನ್ನು ಕೊಡಬೇಕೆಂದು ಮಾಡಿದ್ದೆನು; ಆದರಿಂದ ಪ್ರಬಂಧಗಳ ಹಲವು ವಿಷಯಗಳನ್ನು ಒಟ್ಟುಗೂಡಿಸಿ ಅವುಗಳನ್ನು ವ್ಯವಸ್ಥೆಗೊಳಿಸು

ವಾಗ ಎಷ್ಟು ಶ್ರಮಪಟ್ಟಿರುವೆನೆಂಬದು ವಾಚಕರ ಮನಸ್ಸಿನಲ್ಲಿ ಬರಬಹುದಾಗಿತ್ತು; ಆದರೆ ಅವಸರದಲ್ಲಿ ನಕಾಶ ತೆಗಿಸಲಿಕ್ಕೆ ಅನುಕೂಲವಾಗದ್ದರಿಂದ ಪ್ರಬಂಧದ ವಿಷಯುಗಳ ಸಾಮಾನ್ಯ ವರ್ಗಗಳನ್ನು ಇದರಡಿಯಲ್ಲಿ ಕಾಣಿಸಿರುವೆನು. ಈ ಪ್ರಬಂಧಕ್ಕೆ **ಅನುಭವ** ಮತ್ತು **ವಿಚಾರ** ಇವೆರಡು ಅವಶ್ಯವೆಂದು ಹಿಂದೆ ಹೇಳಿರುತ್ತದೆ. ಅನುಭವವೇ ಮುಖ್ಯವಾಗಿ ವಿಚಾರವು ಗೌಣವಾಗಿ ಉಳ್ಳ ಪ್ರಬಂಧದ ವಿಷಯಗಳು ಅನುಭವ ಸಾಧ್ಯವಿಷಯಗಳು. ವಿಚಾರವೇ ಮುಖ್ಯವಾಗಿ ಅನುಭವವು ಗೌಣವಾಗಿ ಉಳ್ಳ ಪ್ರಬಂಧದ ವಿಷಯಗಳು ವಿಚಾರ ಸಾಧ್ಯ ವಿಷಯಗಳು. ಮೊದಲನೆಯ ಪ್ರಕಾರದ ವಿಷಯಗಳು ಸುಲಭ, ಎರಡನೆಯ ಪ್ರಕಾರದ ವಿಷಯಗಳು ಕಠಿಣ.

**ಅನುಭವಸಾಧ್ಯ ವಿಷಯುಗಳು**—ಇವುಗಳಲ್ಲಿ ಕಥನಪರ, ವರ್ಣನಪರ ಎಂಬ ಎರಡು ವರ್ಗಗಳಿರುತ್ತವೆ. ಕಥನಪರದಲ್ಲಿ, ಅಂದರೆ ಕೇಳಿ ಮನಗಂಡ ವಿಷಯುಗಳಲ್ಲಿ, ಕಟ್ಟು ಕಥೆಗಳು, ಪೌರಾಣಿಕ ಕಥೆಗಳು, ಐತಿಹಾಸಿಕ ಕಥೆಗಳು ಬರುವವು. ವರ್ಣನ ಪರಗಳಲ್ಲಿ, ಅಂದರೆ ನೋಡಿ ಮನಗಂಡ ವಿಷಯುಗಳಲ್ಲಿ ವಸ್ತುಗಳು, ಪ್ರಸಂಗಗಳು ಎಂಬ ಎರಡುಬಗೆಯ ವಿಷಯುಗಳು ಬರುವವು. ವಸ್ತುಗಳಲ್ಲಿ ಸಜೀವ ನಿರ್ಜೀವ ಎಂದು ಎರಡು ಪ್ರಕಾರಗಳಿದ್ದು, ಸಜೀವಗಳಲ್ಲಿ ಪ್ರಾಣಿಗಳು, ವನಸ್ಪತಿಗಳು, ನಿರ್ಜೀವಗಳಲ್ಲಿ ಪ್ರಾಕೃತಿಕ ವಸ್ತುಗಳು, ಕೃತ್ರಿಮ ವಸ್ತುಗಳು ಬರುವವು. ಇನ್ನು ಪ್ರಸಂಗಗಳಲ್ಲಿ ಸಹಜ ಪ್ರಸಂಗ, ಕೃತ್ರಿಮಪ್ರಸಂಗ ಎಂಬ ಎರಡು ವಿಧಗಳಿದ್ದು, ಋತು ವರ್ಣನಗಳಂಥವು ಸಹಜ ಪ್ರಸಂಗಗಳು; ಲಗ್ನ, ಮುಂಜಿಗಳಂತಹ ಪ್ರಸಂಗಗಳು ಕೃತ್ರಿಮ ಪ್ರಸಂಗಗಳು.

**ವಿಚಾರಸಾಧ್ಯ ವಿಷಯುಗಳು**—ಇವುಗಳಲ್ಲಿ ಸಾಮಾನ್ಯರೂಪ-ವಿಷಯುಗಳು, ವಿಧಾನ ರೂಪವಿಷಯಗಳು ಎಂಬ ಎರಡು ಮುಖ್ಯ ವರ್ಗಗಳಿರುವವು. ಸಾಮಾನ್ಯರೂಪ ವಿಷಯಗಳಲ್ಲಿ ಗುಣದರ್ಶಕಗಳು, ಸ್ಥಿತಿದರ್ಶಕಗಳು, ಕಾರ್ಯದರ್ಶಕಗಳು ಎಂಬ ಮೂರುಬಗೆಯ ವಿಷಯಗಳಿರುವವು. ವಿಧಾನ ರೂಪ ವಿಷಯಗಳಲ್ಲಿ ಉಪದೇಶ ದರ್ಶಕಗಳು, ಸಿದ್ಧಾಂತ ದರ್ಶಕಗಳು ಎಂಬ ಎರಡು ವರ್ಗಗಳಿರುವವು. ಸ್ಥಳ ಸಂಕೋಚಕ್ಕಾಗಿ ಉದಾಹರಣಗಳನ್ನು ಕೊಡದೆ ವಿಷಯಭೇದಗಳನ್ನು ಮಾತ್ರ ಇಲ್ಲಿ ತೋರಿಸಿರುತ್ತದೆ.

ಈ ಪ್ರಬಂಧ-ಶಿಕ್ಷಣವು ಕ್ರೌನ ಅಷ್ಟಪತ್ರದ ೪೦೦ ಪುಟದ ಪುಸ್ತಕವಾಗಬಹುದು. ಅದರಲ್ಲಿ ಎರಡು ಭಾಗಗಳನ್ನು ಮಾಡುವ ವಿಚಾರವೂ ಇರುವದು.

(೧) ಈ ೧೦ ವಿಷಯಗಳಲ್ಲದೆ "ಮಾನವೀಕರ್ತವ್ಯ" ಅಥವಾ "ಬದ್ಧ ಜೀವನ ಭಾಗ್ಯಶಾಲಿತ್ವ" (೨) "ಶಾಂತಿನಿಲಯ" ಅಥವಾ "ಸರ್ವ ಧರ್ಮಸಾರ್ಥಕತೆ" ಎಂಬ ಎರಡು ವಿಷಯಗಳ ಉಪೋದ್ಘಾತಗಳನ್ನು ಮಹನೀಯರ ಅವಲೋಕನಕ್ಕಾಗಿ ಕೊಡಬೇಕೆಂದಿದ್ದೆನು; ಆದರೆ ಕಾರಣಾಂತರದಿಂದ ಬೇಗನೆ ಪುಸ್ತಕ ಮುಗಿಸಬೇಕಾದದ್ದರಿಂದ ಬಿಡಬೇಕಾಯಿತು.



## ವಿನಯದ ಬೇಡಿಕೆ

ಈ ಮೇರೆಗೆ ನಾನು ಬರೆಯಬೇಕೆಂದು ಆಶಿಸುವ ಪುಸ್ತಕಗಳನ್ನು ಬರೆಯಲಿಕ್ಕೆ ಒಂದು ಸ್ಥಳಹಿಡಿದು ಕುಳಿತು ಕೊಳ್ಳಬೇಕಾಗುವದಷ್ಟೆ? ಆದರೆ ಹಾಗೆ ಬರೆಯುತ್ತ ಕುಳಿತುಕೊಂಡರೆ ಸಾಲವು ತೀರುವದಿಲ್ಲ; ಅಲ್ಲದೆ ಬರೆದ ಪುಸ್ತಕಗಳನ್ನು ಪ್ರಿಂಟುಮಾಡಿಸಲಿಕ್ಕೆ ಹೊಸದಾಗಿ ಸಾಲಮಾಡಬೇಕಾಗುತ್ತದೆ. ಹಾಗೆಮಾಡದೆ ಸಾಲತೀರಿಸಬೇಕೆಂದು ಊರೂರು ತಿರುಗಿದರೆ ಬರೆಯುವದು ಆಗುವದಿಲ್ಲ. ಇಂಥಹ ಇಕ್ಕಟ್ಟಿನ ಪ್ರಸಂಗದಲ್ಲಿ ನನ್ನ ಸಾಲ ತೀರಿಸಿ ನನ್ನನ್ನು ಬರೆಯಲಿಕ್ಕೂ ಹಚ್ಚಲಿಕ್ಕೆ ಮೈಸೂರ ಕನ್ನಡಿಗರ ಹೊರತು ಬೇರೆಯವರು ಸಮರ್ಥರಾಗಲಾರರೆಂದು ನನ್ನ ಭಾವನೆಯಾಗಿದೆ! ಯಾಕಂದರೆ ಪುಣ್ಯವಂತರಾದ ಮೈಸೂರ ಕನ್ನಡಿಗರು ಸ್ವರಾಜ್ಯವುಳ್ಳವರಾದ್ದರಿಂದ, ಅವರಲ್ಲಿ ನಮ್ಮಂತಹ ಆರ್ತರಾದ ಲೇಖಕರಿಗೆ ಆಶ್ರಯಕೊಡುವ ಅನುಕೂಲತೆಗಳಿರುವವೆಂಬದನ್ನು ನಾನು ಅರಿತಿರುವೆನು. ಯೋಗ್ಯವಾದ ಕನ್ನಡ ಪುಸ್ತಕಗಳಿಗೆ ಆಶ್ರಯಕೊಡುವದಕ್ಕಾಗಿ ಮೈಸೂರ ನಾಡಿನಲ್ಲಿ ಮಿಡಲ್‌ಸ್ಕೂಲುಗಳ ಇನ್ನೂರು ಮುನ್ನೂರು ಲಾಯಬ್ರರಿಗಳುಂಟು; ಹಾಯಸ್ಕೂಲು-ಕಾಲೇಜುಗಳ ಲಾಯಬ್ರರಿಗಳುಂಟು; ಮುನಸಿಪಾಲಟಿಯ ದೊಡ್ಡ

ದೊಡ್ಡ ಶಾಲೆಗಳ ಲಾಯಬ್ರರಿಗಳುಂಟು; ಎಷ್ಟೋ ಸಾರ್ವಜನಿಕ ಲಾಯಬ್ರರಿಗಳುಂಟು; ಅಂದಬಳಿಕ ಬರಿಯ ಲಾಯಬ್ರರಿಗಳೇ ನಾನು ಬರೆದಿರುವ ಎಲ್ಲಪುಸ್ತಕಗಳ ಒಂದೊಂದು ಸೆಟ್ಟನ್ನು ತಕ್ಕೊಂಡರೆ ನನ್ನ ಐದುಸಾವಿರದ ಎಂಟುನೂರು ರೂಪಾಯಿಗಳ ಸಾಲವು ನಿರಾಯಾಸವಾಗಿ ತೀರಬಹುದು!

ಈ ಲಾಯಬ್ರರಿಗಳಲ್ಲದೆ ಲೋವರಸೇಕಂಡರಿ, ಮೆಟ್ರಿಕ್, ಇಂಟರ ಕ್ಲಾಸುಗಳೂ, ನಾರ್ಮನ್ ಸ್ಕೂಲೂ ಯೋಗ್ಯವಾದ ಕನ್ನಡ ಪುಸ್ತಕಗಳಿಗೆ ಪಠ್ಯ ಪುಸ್ತಕಗಳ ರೂಪದಿಂದ ಆಶ್ರಯಕೊಡಲಿಕ್ಕೆ ಸಿದ್ಧವಾಗಿರುವವು. ಇದೊಂದು ವಿಶೇಷ ಪ್ರಸಂಗವೆಂದು ತಿಳಿದು ಒಂದೇವರ್ಷ ಲೋವರ್ ಸೆಕಂಡರಿಗೆ ನನ್ನದೊಂದು ಪುಸ್ತಕವನ್ನು ಪಠ್ಯಪುಸ್ತಕವಾಗಿ ನಿಯಮಿಸಿಬಿಟ್ಟರೆ, ನನ್ನ ಸಾಲತೀರಿ ಹೆಚ್ಚು ಹಣ ಉಳಿದು ನನ್ನ ವೈದಿಕ ಪಾಠಶಾಲೆಯು ಪುನಃ ಆರಂಭವಾಗಲಿಕ್ಕೆ ಉತ್ತೇಜನವು ದೊರೆತಂತಾಗಬಹುದು! ಅದರಂತೆ ಮೆಟ್ರಿಕ್-ಇಂಟರ್ ಕ್ಲಾಸುಗಳಿಗೆ ಒಂದೊಂದು ಪುಸ್ತಕದಂತೆ ಒಂದು ವರ್ಷ ನನ್ನ ಪುಸ್ತಕಗಳನ್ನು ಹಚ್ಚಿದರೆ ನನ್ನ ಸಾಲದ ಬಹು ದೊಡ್ಡ ಭಾಗವು ತೀರಬಹುದು. ಈ ಎಲ್ಲ ಮಾರ್ಗಗಳಿಂದ ನನಗೆ ಆಶ್ರಯ ದೊರೆತಲ್ಲಿ ಕನ್ನಡಿಗರ ನನ್ನ ಸೇವೆಗೆ ಎಷ್ಟು ಅನುಕೂಲವಾಗಬಹುದಲ್ಲ! ಮೈಸೂರ ನಾಡಿನ ಕನ್ನಡದ ಅಭಿಮಾನಿಗಳಾದ ವಿದ್ವಾಂಸರೂ, ಅಧಿಕಾರಿಗಳೂ ನನ್ನ ಪುಸ್ತಕಗಳು ಮನಸ್ಸಿಗೆ ಬಂದರೆ ಯಾಕೆ ಆಶ್ರಯ ಕೊಡಬಾರದು? ಹಾಗೆ ಆಶ್ರಯಕೊಡುವ ಮನಸ್ಸು ಅವರಿಗೆ ಆಗಬೇಕೆಂದೇ ಈ ಸದ್ಗುರು ಪ್ರಭಾವವೆಂಬ ಪುಸ್ತಕದ ರೂಪದಿಂದ ನನ್ನ ಮನೋದಯ ಸರ್ವಸ್ವವನ್ನು ಬುದ್ಧಿಪೂರ್ವಕ ಅವರ ಸನ್ನಿಧಿಯಲ್ಲಿ ಬಿಚ್ಚಿ ಇಟ್ಟಿದ್ದೇನೆ. ಮಹನೀಯರೇ, ಆಶ್ರಯಪಡೆಯುವ ಪ್ರಸಂಗ ಒದಗಿದಲ್ಲಿ ಮಹದಾಶ್ರಯವನ್ನೇ ಪಡೆಯಬೇಕಲ್ಲವೆ?

ನಾನು ಯಾವ ಬಗೆಯ ಪುಸ್ತಕಗಳನ್ನು ಬರೆದಿರುವೆನೆಂಬದನ್ನೂ, ಯಾವ ಉದ್ದೇಶದಿಂದ ಪುಸ್ತಕ ಬರೆದಿರುವೆನೆಂಬದನ್ನೂ-ಹಿಂದೆ "ಗ್ರಂಥನಾಥನ ಪುಸ್ತಕಗಳು" ಎಂಬ ೫ನೆಯ ಪ್ರಕರಣದಲ್ಲಿ ನಿವೇದಿಸಿರುತ್ತೇನೆ; ಮತ್ತು ಆಯಾ ಪುಸ್ತಕಗಳಲ್ಲಿಯ ವಿಷಯಗಳ ಬೋಧವಾಗುವದಕ್ಕಾಗಿ ಈ ಪುಸ್ತಕದ

ಕಟ್ಟ ಕಡೆಯ ೯ನೆಯ ಪ್ರಕರಣದಲ್ಲಿ ಪ್ರತಿಒಂದು ಪುಸ್ತಕದಲ್ಲಿಯ ವಿಷಯದ ಅತಿ ಸಂಕ್ಷಿಪ್ತ ವರ್ಣನವನ್ನು ಕೊಟ್ಟಿರುತ್ತೇನೆ. ಅವುಗಳಲ್ಲಿಯ ಕನ್ನಡಿಗರಿಗೆ ಸಂಬಂಧಿಸಿದ ಮೂರು ಕಾದಂಬರಿಗಳಲ್ಲಿ "ಕುಮುದಿನಿ" ಎಂಬ ಕಾದಂಬರಿಯುಇಲ್ಲಿ ಈವರ್ಷ ಮೆಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಲ್ಪಟ್ಟಿರುವದು. ಇನ್ನು ಉಳಿದ ಎರಡು ಕಾದಂಬರಿಗಳಲ್ಲಿ "ಮಾಧವಕರುಣಾವಿಲಾಸ"ವು ಅತಿದೊಡ್ಡ ಕಾದಂಬರಿಯೆಂದು ಬಿಟ್ಟರೆ, ಉಳಿಯುವ "ಕನ್ನಡಿಗರ ಕರ್ಮಕಥೆ" ಎಂಬ ಹೆಸರಿನ ತಾಳೀಕೋಟೆಯ ಕಾಳಗದ ಸುರಸ ಕಾದಂಬರಿಯು ಮೆಟ್ರಿಕ್ ಕ್ಲಾಸಿಗಾಗಲಿ, ಇಂಟರ ಕ್ಲಾಸಿಗಾಗಲಿ ಪಠ್ಯಪುಸ್ತಕವಾಗಿ ನಿಯಮಿಸಲು ಯೋಗ್ಯವಾಗಿರುವದೆಂದು ವಿನಯದಿಂದ ಸೂಚಿಸುವೆನು. ಬೇಕಾದರೆ ಅವನ್ನು ಇಲ್ಲಿಯ ಭಾಷಾಪಂಡಿತರ ಸೂಚನೆಯಂತೆ ತಿದ್ದಿ ಹೊಸ ಆವೃತ್ತಿಯನ್ನು ಹೊರಡಿಸುವೆನು.

ಮರಾಟರಿಗೆ ಸಂಬಂಧಿಸಿದ ನನ್ನ ಉತ್ತಮವಾದ ಕಾದಂಬರಿಗಳು ಏಳು ಇದ್ದು, ಈವರೆಗೆ ಆ ಯಾವ ಕಾದಂಬರಿಗಳೂ ಇಲ್ಲಿ ಪಠ್ಯ ಪುಸ್ತಕಗಳಾಗಿ ನಿಯಮಿಸಲ್ಪಟ್ಟಿರುವದಿಲ್ಲ. ನಾನು ಬರೆದಿರುವ ಕಾದಂಬರಿಗಳಲ್ಲಿ ಈ ಮರಾಟರ ಕಾದಂಬರಿಗಳೇ ನನ್ನ ಅನುಭವದ ದೃಷ್ಟಿಯಿಂದಲೂ, ಕನ್ನಡಿಗರ ಸದಭಿಪ್ರಾಯದ ದೃಷ್ಟಿಯಿಂದಲೂ ಸ್ವಾಮಿಭಕ್ತಿಯ ಹಾಗು ಸ್ವಾಭಿಮಾನದ ಅಭಿವೃದ್ಧಿಗೊಳಿಸುವಲ್ಲಿ ಅತ್ಯಂತ ಸಮರ್ಥವಾದವುಗಳು. ಅವುಗಳಲ್ಲಿ ಶಿವಾಜಿಯು ತೋರಣ ಗಡವನ್ನು ತಕ್ಕೊಂಡು ಸ್ವರಾಜ್ಯದ ತೋರಣಕಟ್ಟಿದ "ಈಶ್ವರೀ ಸೂತ್ರ" ಎಂಬ ಮನೋಹರ ಕಾದಂಬರಿಯನ್ನೂ, ತಾನಾಜಿ ಎಂಬ ವೀರಾಗ್ರಣಿ ಸ್ವಾಮಿನಿಷ್ಠನು ಅತುಲಪರಾಕ್ರಮದಿಂದ ಸಿಂಹಗಡವನ್ನು ದಿಲ್ಲಿಯ ಬಾದಶಹನ ಕೈಯಿಂದ ಕಸಿದುಕೊಂಡ "ಕಮಲ ಕುಮಾರಿ" ಎಂಬ ಸುಪ್ರಸಿದ್ಧ ಕಾದಂಬರಿಯನ್ನೂ ಮೆಟ್ರಿಕ್ಕಿಗಾಗಲಿ, ಇಂಟರ ಕ್ಲಾಸಿಗಾಗಲಿ ಪಠ್ಯ ಪುಸ್ತಕವಾಗಿ ನಿಯಮಿಸಬಹುದೆಂದು ವಿನಯದಿಂದ ಸೂಚಿಸುವೆನು. ಇವನ್ನಾದರೂ ಇಲ್ಲಿಯ ಭಾಷಾ ಪಂಡಿತರ ಸೂಚನೆಯಂತೆ ತಿದ್ದಿ ಹೊಸ ಆವೃತ್ತಿಯನ್ನು ಹೊರಡಿಸುವೆನು.

ರಜಪೂತರಿಗೆ ಸಂಬಂಧಿಸಿದ ಉತ್ಕೃಷ್ಟವಾದ ಕಾದಂಬರಿಗಳು ಒಂಬತ್ತು ಇದ್ದು, ಅವುಗಳಲ್ಲಿ "ಧರ್ಮರಹಸ್ಯ" ಎಂಬ ಒಂದು ಕಾದಂಬರಿಯು ಮಾತ್ರ ಈಗೆರಡು ವರ್ಷಗಳ ಹಿಂದೆ ಇಲ್ಲಿಯ ಮೆಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಲ್ಪಟ್ಟಿತ್ತು. ಹೇಮಚಂದ್ರನ ಬಂಗಾಲದ ಹೊಸ ರಾಜ್ಯಸ್ಥಾಪನೆಗೆಸಂಬಂಧಿಸಿದ "ರಾಣೀ-ಮೃಣಾಲಿನಿ"ಎಂಬ ಸುರಸ ಕಾದಂಬರಿಯನ್ನೂ, ಮಹಾರಾಣಾ-ಪ್ರತಾಪಸಿಂಹನಿಗೆ ಸಂಬಂಧಿಸಿದ ಅಕಬರ ಬಾದಶಹನ ಕಾಲದ "ಸತ್ವಸಾರ" ಎಂಬ ಉತ್ತಮ ಕಾದಂಬರಿಯನ್ನೂ, ಬುಂದೇಲ ಖಂಡವನ್ನು ಔರಂಗಜೇಬ ಬಾದಶಹನ ಕಾಲದಲ್ಲಿ ಸ್ವತಂತ್ರವಾಗಮಾಡಿದ "ಧಾರ್ಮಿಕತೇಜ" ಎಂಬ ಹೊಸ ಕಾದಂಬರಿಯನ್ನೂ ಅವವುಗಳ ಯೋಗ್ಯತೆ ನೋಡಿ, ಈ ವರ್ಷ ಮೆಟ್ರಿಕ್ ಕ್ಲಾಸಿಗಾಗಲಿ, ಇಂಟರ ಕ್ಲಾಸಿಗಾಗಲಿ ಪಠ್ಯಪುಸ್ತಕವಾಗಿ ನಿಯಮಿಸಬಹುದೆಂದು ವಿನಯದಿಂದ ಸೂಚಿಸುವೆನು. ಈ ರಜಪೂತರಿಗೆ ಸಂಬಂಧಿಸಿದ "ರಾಣಾ-ರಾಜಸಿಂಹ" ಎಂಬ ಚಿಕ್ಕ ಸುಂದರ ಹೊಸ ಕಾದಂಬರಿಯು ಲೋವರ್ ಸೆಕಂಡರಿಗೆ ಪಠ್ಯ ಪುಸ್ತಕವಾಗಿ ನಿಯಮಿಸಲು ತಕ್ಕದ್ದಾಗಬಹುದಾಗಿ ತೋರುತ್ತದೆ.

ಈ ಎಲ್ಲ ಪುಸ್ತಕಗಳಲ್ಲಿ ಸದ್ಯಕ್ಕೆ ಸಿಲಕು ಇರುವ ಪುಸ್ತಕಗಳ ಒಂದೊಂದು ಪ್ರತಿಯನ್ನು ಮೈಸೂರ ಯುನಿವರ್ಸಿಟಿಗೂ, ಮೆಹರ್ಬಾನ ಇನಸ್ಪೆಕ್ಟರ ಜನರಲ್ ಸಾಹೇಬರವರ ಸನ್ನಿಧಿಗೂ ಕಳಿಸುವೆನು. ಅವಲೋಕನವಾಗಿ ಆಶ್ರಯ ದೊರತರೆ ಉಪಕೃತನಾಗುವೆನು. ಇದರಂತೆ, ನನ್ನ ಪುಸ್ತಕಗಳ ವಿಷಯವಾಗಿ ಇಲ್ಲಿಯ ಸಾಹಿತ್ಯ ಪರಿಷತ್ತಿನಂಥ ಗೌರವದ ಸಂಸ್ಥೆಯು ಹಿಂದೆ ೪ ನೆಯಪ್ರಕರಣದಲ್ಲಿ ಉಲ್ಲೇಖಿಸಿರುವಂತೆ, ನನ್ನಕನ್ನಡ ಭಾಷಾಸೇವೆಯನ್ನು ಗೌರವಿಸುವ ದ್ವಾರದಿಂದ ಸದಭಿಪ್ರಾಯಪಟ್ಟು ೨೫೦ ರೂಪಾಯಿಗಳನ್ನು ಉಚಿತವಾಗಿ ಕೊಟ್ಟಿರುವದರಿಂದ, ಅವೆಲ್ಲವನ್ನು ಸ್ಕೂಲ ಲೈಬ್ರರಿಗಳಿಗಾಗಿ ಕೊಳ್ಳುವದಕ್ಕಾಗಿ ಮೆಹರ್ಬಾನ ಇನ್ಸ್ಪೆಕ್ಟರ್ ಜನರಲ್ ಸಾಹೇಬರವರು ಪರವಾನಿಗೆ ಕೊಡಬೇಕೆಂದು ಬೇಡಿಕೊಳ್ಳುವೆನು. ಆ ಎಲ್ಲ ಪುಸ್ತಕಗಳ ಒಂದೊಂದು ಕಾಪಿಯನ್ನು ಮೆಹರ್ಬಾನರವರ 'ಅವಲೋಕನಕ್ಕಾಗಿ ಸನ್ನಿಧಿಗೆ ಕಳಿಸುವೆನು.

ಈ ಮೇರೆಗೆ ಮೈಸೂರ ನಾಡಿನಿಂದಲೇ ನನ್ನ ಸಾಲವು ತೀರಬೇಕೆಂಬ ಉದ್ದೇಶದಿಂದ ನಾನು ಮಾಡತಕ್ಕ ಯತ್ನಗಳನ್ನು ಮಾಡಿರುವೆನು. ಆ ಯತ್ನಗಳನ್ನು ಸಫಲಗೊಳಿಸಿ ನನ್ನ ಬಹುದಿವಸದ ಸಾಲ ತೀರಿಸಿ ನನ್ನ ಭಾಷಾ ಸೇವೆಯ ದೊಡ್ಡ ಪ್ರತಿಬಂಧವನ್ನು ದೂರಮಾಡಿದ ಕೀರ್ತಿಯನ್ನು ಸಂಪಾದಿಸುವ ಭಾರವು ಮೈಸೂರ ಕನ್ನಡ ಅಭಿಮಾನಿಗಳಾದ ವಿದ್ವಾಂಸರ ಮೇಲೆಯೂ, ವಿದ್ಯಾಖಾತೆಯ ಅಧಿಕಾರಿಗಳ ಮೇಲೆಯೂ ಇರುತ್ತದೆ; ಆದರೆ ಸಾಲಗಾರನಾದ ನನ್ನಂತಹ ಅಲ್ಪನ ದೃಷ್ಟಿಯಿಂದ ಅದು ಭಾರವಾಗಿ ತೋರಿದರೂ, ಆ ಮಹನೀಯರಿಗೇನು ಅದು ಭಾರವಾದದ್ದಲ್ಲ; ಯಾಕಂದರೆ ಯೋಗ್ಯ ಪುಸ್ತಕಗಳನ್ನು ನಿಯಮಿಸುವಅಧಿಕಾರವು ಅವರಿಗಿದ್ದು, ಅವನ್ನು ಕೊಳ್ಳಲು ವಿದ್ಯಾರ್ಥಿವರ್ಗವು ಬದ್ಧವಾಗಿರುವದು; ಆದ್ದರಿಂದ ಯಾರ ಮೇಲೆಯೂ ನಿರರ್ಥಕ ಭಾರವು ಬೀಳದೆ ನನ್ನ ಸಾಲವು ನಿರಾಯಾಸವಾಗಿ ತೀರಬಹುದಾಗಿದೆ; ಆದ್ದರಿಂದ ನನ್ನ ವಿನಂತಿಯಕಡೆಗೆ ಆ ಮಹನೀಯರ ಲಕ್ಷವು ಹೋಗುವಂತೆ ಶ್ರೀ ಸದ್ಗುರುವು ನನ್ನನ್ನು ಅನುಗ್ರಹಿಸಲೆಂದು ಪ್ರಾರ್ಥಿಸುವೆನು.

ಈ ಮೇರೆಗೆ ಮೈಸೂರನಾಡಿನವರ ಅನುಗ್ರಹದಿಂದ ನನ್ನ ಸಾಲತೀರಿದ ಬಳಿಕ ಅದರ ಶ್ರೇಯಸ್ಸನ್ನು ಧರ್ಮಿಷ್ಠ ಪ್ರಭುಗಳಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಚರಣಗಳಿಗೆ ಅರ್ಪಿಸಬೇಕೆಂದು ಮಾಡಿದ್ದೇನೆ. ಆಮೇಲೆ "ಅರಮನೆಯಿಂದ ಗುರುಮನೆ" ಎಂಬಂತೆ, ಮೈಸೂರ ನಾಡಿನಲ್ಲಿಯ ಸರ್ವಮತಗಳ ಧರ್ಮಪೀಠಸ್ಥ ಶ್ರೀಗಳವರ ಚರಣದರ್ಶನದಿಂದ ಪುನೀತನಾಗಿ ಪುನಃ ವೈದಿಕ ಪಾಠಶಾಲೆಯನ್ನು ಆರಂಭಿಸಲು ದಿವ್ಯಸನ್ನಿಧಿಗಳ ಆಶೀರ್ವಾದಪಡೆದು ಧನ್ಯನಾಗಬೇಕೆಂದು ಆತುರಪಡುತ್ತಿರುವೆನು! ನನ್ನ ಈ ಪ್ರಾರ್ಥನೆ-ಈ ಇಚ್ಛೆ-ಈ ಆತುರಗಳನ್ನು ಸಫಲಗೊಳಿಸಲು, ನನ್ನ ಕುಲಸ್ವಾಮಿಯಾದ ಶ್ರೀ ಲಕ್ಷ್ಮೀವೇಂಕಟೇಶನು ಸಮರ್ಥನಿರುವನು !



# ಗಳಗನಾಥರ ಪುಸ್ತಕಗಳ ಸಂಕ್ಷಿಪ್ತ ವರ್ಣನ.

## ಕಾದಂಬರಿಗಳು

### (ಕನ್ನಡಿಗರಿಗೆ ಸಂಬಂಧಿಸಿದವು)

೧ **ಮಾಧವ-ಕರುಣಾವಿಲಾಸ**—ತನ್ನ ವಿಶೇಷ ಗುಣಗಳಿಂದ ಕನ್ನಡಿಗರ ಆದರಕ್ಕೆ ಪಾತ್ರವಾಗಿರುವ ಈ ಸುರಸವಾದ ಅತಿ ಗೌರವದ ತತ್ವ ಪ್ರಕಾಶಕ ಸ್ವತಂತ್ರ ಐತಿಹಾಸಿಕ ಕಾದಂಬರಿಯು, ಡೆಮ್ಮಿ ಅಷ್ಟ ಪತ್ರದ ಆರುನೂರು ಪುಟಗಳುಳ್ಳದ್ದಾಗಿರುವದು. ಮೂರು ವರ್ಷಗಳಿಂದ ಬಹು ಶ್ರಮಬಟ್ಟು ಬರೆದಿರುವ ಈ ಘನತರವಾದ ಕಾದಂಬರಿಯನ್ನು ಪ್ರತ್ಯಕ್ಷ ಶ್ರೀ ಮಾಧವಾಚಾರ್ಯರೇ (ಶ್ರೀ ವಿದ್ಯಾರಣ್ಯರೇ) ಬರೆಸಿರುವದರಿಂದ, ಅದರ ಯೋಗ್ಯತೆಯನ್ನು ನಾನುವರ್ಣಿಸಲಾರೆನು. ಇಡಿಯ ಕರ್ನಾಟಕದಚಿತ್ತವನ್ನು ಈ ಕಾದಂಬರಿಯು ಆಕರ್ಷಿಸಿರುವದು. ಈಗಿನ ಕಾಲದಲ್ಲಿ ಈಕಾದಂಬರಿಯನ್ನುಓದದ ಕನ್ನಡಿಗರು ನಿಶ್ಚಯವಾಗಿ ಅಧನ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಅಲೌಕಿಕ ಸಾಮರ್ಥ್ಯವು ಯಾವ ಕನ್ನಡಿಗನ ಸದೂರ್ಮಿಗಳನ್ನು ಸ್ಫೂರ್ತಿಗೊಳಿಸಲಿಕ್ಕಿಲ್ಲ? ಗಳಗನಾಥರ ವಿವಿಧ ಮನೋಹರ ಕಾದಂಬರಿಗಳಲ್ಲಿ ಇದು ಶ್ರೇಷ್ಠತರ ಕಾದಂಬರಿಯಾಗಿದ್ದು, ವಿದ್ಯಾರಣ್ಯರಂಥ ಮಹಾತ್ಮರ ಸತ್‌ಸ್ಫೂರ್ತಿಯಿಂದ ಆ ಗಳಗನಾಥರ ಹೃದಯವು ಇದರಲ್ಲಿ ಬಿಚ್ಚಿ ಇಡಲ್ಪಟ್ಟಿರುವದು.

ಈ ಮನೋಹರ ಕಾದಂಬರಿಯಲ್ಲಿ ೬೦ ಪ್ರಕರಣಗಳಿದ್ದು, ಅವುಗಳಲ್ಲಿ ೧ ವ್ಯಾವಹಾರಿಕ ಯೋಗತ್ರಯಗಳು. ೨ ಧರ್ಮದ ದುರಭಿಮಾನ. ೩ ವೈದಿಕ ಧರ್ಮಗಳು. ೪ ಅವೈದಿಕ ಧರ್ಮಗಳು. ೫ ಶಾಂತಿಯ ಪ್ರತ್ಯಕ್ಷ ಕಾರಣವು ಅಧ್ಯಯನವಲ್ಲ, ಗುರು ಕೃಪೆಯು! ೬ ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರವೂ ೭ ಅಸ್ಪೃಶ್ಯತೆಯೂ ರಾಜಕೀಯ ವ್ಯವಹಾರವೂ. ೮ ಸಹಯೋಗ. ೯ ಅಸಹಯೋಗದ ಪ್ರಭೇದಗಳು. ೧೦ ಅಹಿಂಸಾ ತತ್ವವೂ, ರಾಜಕೀಯ ಅಹಿಂಸೆಯೂ. ೧೧ ರಾಷ್ಟ್ರದ ವಿವೇಕೋದಯ (ಬ್ರಾಹ್ಮಣ ಬ್ರಾಹ್ಮಣೇತರ ವಿವೇಕ.) ೧೨ ದೇಶದ್ರೋಹವೂ,

ರಾಜದ್ರೋಹವೂ. ೧೩ ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು. ೧೪ ದೇಶದ್ರೋಹಿಗಳ ಹೇಸಿತನ. ೧೫ ಸಜ್ಜನರಿಗೆ ಶತ್ರುಗಳೂ ಸ್ವಕೀಯರೇ. ೧೬ ದೇಶವಿಘಾತಕ ಭೇದಭಾವನಿರಸನ. ೧೭ ರಾಜದ್ರೋಹದ ಸ್ವರೂಪ. ೧೮ ಅಂತಃಕಲಹವು ಆಳಿಗಾಲದ ಲಕ್ಷಣವು ಇತ್ಯಾದಿ ಮಹತ್ವದ ವಿಷಯಗಳನ್ನು ಕುರಿತು ಶ್ರೀ ಮಾಧವಾಚಾರ್ಯರು ಸಮರ್ಪಕವಾಗಿ ನಿರ್ಣಯಿಸಿರುತ್ತಾರೆ. ಈ ಪುಸ್ತಕವನ್ನು ಪ್ರತಿ ಒಬ್ಬ ಕನ್ನಡಿಗನೂ ಮನೆಯಲ್ಲಿ ಸಂಗ್ರಹಿಸತಕ್ಕದ್ದು.

ಈ ಕಾದಂಬರಿಯು ನಮ್ಮ "ಸದ್ಗುರು" ಎಂಬ ಮಾಸಪತ್ರಿಕೆಯಲ್ಲಿ ಭಾಗಶಃ ಎರಡು ವರ್ಷ ಪ್ರಕಟವಾಗಿ, ಉಳಿದ ಕಾದಂಬರೀ ಭಾಗವನ್ನು ಸ್ವತಂತ್ರವಾಗಿ ಬರೆದು ಮುಗಿಸಿರುತ್ತದೆ. ಇದರ ಐದು ಸಾವಿರ ಪ್ರತಿಗಳಲ್ಲಿ ಇನ್ನು ಬಹಳವಾದರೆ ಎರಡುಸಾವಿರ ಪ್ರತಿಗಳು ಉಳಿದಿರಬಹುದು! ಇದನ್ನು ಮುಂಬಯಿ ವಿಶ್ವ ವಿದ್ಯಾಲಯದವರು ಎಂ.ಎ., ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಅವಲೋಕನಕ್ಕಾಗಿ ಇದನ್ನು ಕಳಿಸಿದಾಗ, ಈವರೆಗೆ ಮಾಡಿದ ಕನ್ನಡಿಗರ ಗೌರವದ ಸೇವಾತಿಶಯಕ್ಕಾಗಿ ಆ ಪರಿಷತ್ತು ಗಳಗನಾಥರಿಗೆ ೨೫೦ ರೂಪಾಯಿ ಉಚಿತವಾಗಿ ಕೊಟ್ಟಿದೆ. ಮೈಸೂರ ಸರ್ಕಾರದ ದೇವರಾಜ ಚಾರ್ಟಿ ಫಂಡಿನಿಂದ ಇದಕ್ಕೆ ೨೦೦ ರೂಪಾಯಿಗಳ ಉಚಿತವು ದೊರೆತಿರುವದು. ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘವೂ ಇದಕ್ಕೆ ಉಚಿತವನ್ನು ಕೊಟ್ಟಿರುವದು. ಇದರ ಬೆಲೆ ೩-೧೨-೦ ಪೋಸ್ಟು ವೆಚ್ಚ ಎಂಟು ಆಣೆ.

೨ **ಕನ್ನಡಿಗರ ಕರ್ಮಕಥೆ** — ಘನತರವಾದ ವಿಜಯನಗರದ ರಾಜ್ಯವು ಪ್ರಸಿದ್ಧ ತಾಳೀಕೋಟೆಯ ಕಾಳಗದಿಂದ ರಸಾತಳಕ್ಕೆ ಹೇಗೆ ಹೋಯಿತೆಂಬದನ್ನು ಈ ವಿಸ್ತೃತ ಕಾದಂಬರಿಯಲ್ಲಿ ಬಹು ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವದರಿಂದ ಕನ್ನಡಿಗರಲ್ಲಿ ಸ್ವಾಭಿಮಾನ ಮೂಲವಾದ ಹಲವು ವಿಕಾರಗಳೂ, ವಿಚಾರಗಳೂ ಉತ್ಪನ್ನವಾಗದೆ ಇರಲಿಕ್ಕಿಲ್ಲ! ರಾಮರಾಜ, ತಿರುಮಲ, ವೆಂಕಟಾದ್ರಿ, ಮೆಹಜಾನ, ರಣಮಸ್ತಖಾನ ಮೊದಲಾದ ಪಾತ್ರಗಳ ಚರಿತ್ರ ವಾಚನದಿಂದ ಮನಸ್ಸು ತಲ್ಲೀನ

ವಾಗಿ ಹೋಗುತ್ತದೆ! ಈ ವಿಸ್ತೃತ ಕಾದಂಬರಿಯ ಬೆಲೆಯು ೧-೮-೦ ಪೋಸ್ಟೇಜು ೫ ಆಣೆ.

**ಕುಮುದಿನಿ**—ಇದೂ ಒಂದು ಕನ್ನಡಿಗರ ಅತ್ಯಂತವಾದ ಅಭಿಮಾನಕ್ಕೆ ಆಸ್ಪದವಾದ ಕಾದಂಬರಿಯೇ ಆಗಿರುವದು. ಈ ಐತಿಹಾಸಿಕ ಸ್ವತಂತ್ರ ಕಾದಂಬರಿಯು ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ್ದು. ಈ ಕಾದಂಬರಿಯೊಳಗಿನ ಶೋಕರಸಪ್ರಧಾನವಾದ "ಅಂತಕನ ಕೋಲಾಹಲ" ಎಂಬ ಪ್ರಕರಣವನ್ನು ಓದಿ ನಿಜವಾಗಿ ನಾವು ಮೂರ್ಛಿತರಾದೆವೆಂದು ಒಬ್ಬ ಮೈಸೂರ ಸೀಮೆಯ ಸಹೃದಯ ವಾಚಕರು ತಿಳಿಸಿರುತ್ತಾರೆ. ಇದನ್ನು ಮೈಸೂರ ಸರಕಾರದವರು ಮೆಟ್ರಿಕ್ ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಇದರ ಭಾಷಾಂತರವು ಸಂಸ್ಕೃತದಲ್ಲಿ ಆಗಿದೆ. ಬೆಲೆ ೧ ರೂಪಾಯಿ. ಪೋಸ್ಟೇಜು ನಾಲ್ಕು ಆಣೆ.

(ಮರಾಟರಿಗೆ ಸಂಬಂಧಿಸಿದವು)

೪ **ಈಶ್ವರೀ ಸೂತ್ರ**—ಶಿವಾಜಿಯು ತೋರಣಗಡವೆಂಬ ದುರ್ಗವನ್ನು ತಕ್ಕೊಂಡು ಸ್ವರಾಜ್ಯವನ್ನು ಸ್ಥಾಪಿಸಿ ಸ್ವರಾಜ್ಯದ ತೋರಣ ಕಟ್ಟಿದ ಮನೋಹರ ವೃತ್ತಾಂತವು ಇದರಲ್ಲಿ ವರ್ಣಿಸಿರುತ್ತದೆ. ಇದರ ಲೋಕಪ್ರಿಯತೆಯನ್ನು ಇಷ್ಟೆಂದು ವರ್ಣಿಸಲಾಗುವದಿಲ್ಲ. ಕಾದಂಬರಿಯನ್ನು ಪುನಃ ಪುನಃ ಓದಿದರೂ ಮನಸ್ಸು ತೃಪ್ತವಾಗುವದಿಲ್ಲ. ಇದರ ಬೆಲೆ ೧ ರೂ. ಪೋಸ್ಟೇಜು ೪ ಆಣೆ.

೫ **ಮರಾಟರ ಅಭ್ಯುದಯ**—ಮೇಲೆ ಹೇಳಿದಂತೆ ಶಿವಾಜಿಯು ರಾಜ್ಯವನ್ನು ಸ್ಥಾಪಿಸಿದ ಬಳಿಕ ಅದನ್ನು ನಾಶಮಾಡುವದಕ್ಕಾಗಿ ವಿಜಾಪುರದ ಬಾದಶಹನು ಅಫಜುಲಖಾನನೆಂಬ ಬಲಾಢ್ಯ ಸರದಾರನನ್ನು ದೊಡ್ಡ ಸೈನ್ಯದೊಡನೆ ಕಳಿಸಲು, ಶಿವಾಜಿಯು ಆತನನ್ನು ಯುಕ್ತಿಯಿಂದ ಸಂಹರಿಸಿದ ಸಂಗತಿಯು ಇದರಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವಾಗ ಹಲವು ಕಡೆಯಲ್ಲಿ ವಾಚಕರ ಹೃದಯವು ಉಕ್ಕಿ ಬರುವದೆಂಬದು ಅನುಭವದ ಮಾತಾಗಿರುವದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

೬ **ಕಮಲ ಕುಮಾರಿ**—ದಿಲ್ಲಿಯ ಬಾದಶಹನಾದ ಔರಂಗಜೇಬನು ಶಿವಾಜಿಯ ಹೆಚ್ಚಳವನ್ನು ತಡೆಯದೆ, ಉದಯಭಾನು ಎಂಬ ತನ್ನ ಶೂರ ಸರದಾರನನ್ನು ದೊಡ್ಡ ಸೈನ್ಯದೊಡನೆ ಆತನಮೇಲೆ ಕಳಿಸಿದಾಗ, ಶಿವಾಜಿಯ ಬಾಲ ಮಿತ್ರನಾದ ಅತ್ಯಂತ ಸ್ವಾಮಿನಿಷ್ಠ ತಾನಾಜಿಯು ಸಿಂಹಗಡವನ್ನು ಉದಯಭಾನುವಿನಿಂದ ಕಸಿದುಕೊಂಡು, ತನ್ನ ಒಡೆಯನ ಕಾರ್ಯವನ್ನು ಸಾಧಿಸಿದ ಮನೋಹರ ಪ್ರಸಂಗವನ್ನು ಈ ಕಾದಂಬರಿಯಲ್ಲಿ ವರ್ಣಿಸಿರುತ್ತದೆ. ಇದರ ಆರನೆಯ ಆವೃತ್ತಿಯು ಹೊರಡಬೇಕಾಗಿರುವದು. ಕಾದಂಬರಿಗಳಲ್ಲಿ ಇದನ್ನು ಸರಿಗಟ್ಟುವ ಕಾದಂಬರಿಗಳು ಅತಿ ವಿರಲವೆಂದು ಹೇಳಬಹುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

೭ **ಛತ್ರಪತಿ**— ಮೇಲೆ ಹೇಳಿದಂತೆ ಶಿವಾಜಿಯು ಬಹು ಆಯಕಟ್ಟಿನ ಸ್ಥಳವಾದ ಸಿಂಹಗಡವನ್ನು ಸ್ವಾಧೀನಪಡಿಸಿಕೊಂಡು ಅತಿ ಬಲಿಷ್ಠನಾಗಲು, ಇದನ್ನು ಔರಂಗಜೇಬ ಬಾದಶಹನು ಸೈರಿಸದೆ, ರಾಜಾ - ಜಯಸಿಂಗನೆಂಬ ತನ್ನ ಬಲಾಢ್ಯ ರಜಪೂತ ಸರದಾರನನ್ನು ದೊಡ್ಡ ಸೈನ್ಯದೊಡನೆ ಶಿವಾಜಿಯ ಮೇಲೆ ಕಳಿಸಿದನು. ಆಗ ಶಿವಾಜಿಯು ದೂರ ಲಕ್ಷಕೊಟ್ಟು ಜಯಸಿಂಗನೊಡನೆ ಯುದ್ಧಮಾಡದೆ ಆತನ ಸೂಚನೆಯಂತೆ ದಿಲ್ಲಿಗೆ ಬಾದಶಹನನ್ನು ಕಾಣುವದಕ್ಕಾಗಿ ಹೋಗಲು, ಬಾದಶಹನು ಆತನನ್ನು ಸೆರೆಯಲ್ಲಿರಿಸಿದನು. ಆಗ ಶಿವಾಜಿಯು ತನ್ನ ಮಗ ಸಂಭಾಜಿಯೊಡನೆ ಪೆಟ್ಟಿಗೆಯಲ್ಲಿ ಮಲಗಿಕೊಂಡು ಹೇಗೆ ಪಾರಾಗಿ ಬಂದನೆಂಬದನ್ನು ಈ ಕಾದಂಬರಿಯಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಬೆಲೆ ೧ ರೂ. ಪೊ. ೪ ಆಣೆ.

೮ **ಗೃಹಕಲಹ**—ಇದು ಶಿವಾಜಿ ಮಹಾರಾಜರ ಮರಣ ಪ್ರಸಂಗದ ಕಾದಂಬರಿಯು. ಅತ್ಯಂತ ಶೋಕ ಪರ್ಯವಸಾಯಿ. ಇದು ಗೃಹಕಲಹದ ದುಷ್ಪರಿಣಾಮವನ್ನು ಹೃದಯಭೇದಕವಾಗಿ ವ್ಯಕ್ತಪಡಿಸುವದು. ಇದು ಅತ್ಯಂತ ಲೋಕಪ್ರಿಯವಾಗಿರುವದು. ಬೆಲೆ ೧ ರೂ. ಪೋ. ೪ ಆಣೆ.

೯ **ಶಿವಪ್ರಭುವಿನ ಪುಣ್ಯ**—ಶಿವಾಜಿಯ ಮಗ ಸಂಭಾಜಿಯನ್ನು ಔರಂಗಜೇಬನು ಅತಿಕ್ರೂರತನದಿಂದ ಕೊಲ್ಲಿಸಿದ ಪ್ರಸಂಗವೂ, ಶಿವಾಜಿಯ

ಕಾಲದಲ್ಲಿ ನಾಶವಾದಂತಾಗಿದ್ದ ಮಹಾರಾಷ್ಟ್ರ ರಾಜ್ಯವನ್ನು ಮತ್ತೆ ಸ್ಥಾಪಿಸಿದ ಪ್ರಸಂಗವೂ ಈ ಕಾದಂಬರಿಯಲ್ಲಿ ಬಹು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವು. ಬೆಲೆ ೧ ರೂ. ಪೋ. ೪ ಆಣೆ.

**೧೦ ಕುರುಕ್ಷೇತ್ರ**—ಅತಿ ಗರ್ವವು ನಾಶಕರವೆಂದು ಹೇಳಲವಶ್ಯವಿಲ್ಲ. ಪ್ರತಾಪಶಾಲಿಯಾದ ಪೇಶ್ವೆ ಭಾವುಸಾಹೇಬನ ಅತಿ ಗರ್ವದ ಬಾಧೆಯಿಂದ ಪ್ರಸಿದ್ಧ ಪಾನಿಪತ್ತದ ಕಾಳಗದಲ್ಲಿ ಪೇಶ್ವೆಯವರ ಉತ್ಕರ್ಷವು ಕುಗ್ಗಿದ ದುಃಖಕಾರಕ ಸಂಗತಿಯು ಈ ಕಾದಂಬರಿಯ ಯೋಗದಿಂದ ಬೋಧಪ್ರದವಾಗಿ ಗೊತ್ತಾಗುತ್ತದೆ. ಆದರೂ ಮಹಾರಾಷ್ಟ್ರರ ಪ್ರತಾಪವೂ, ಸಾಮರ್ಥ್ಯವೂ ಎಷ್ಟು ಘನತರವಾದವಿದ್ದವೆಂಬದನ್ನು ಈ ಕಾದಂಬರಿಯು ತೋರಿಸದೆ ಇರುವದಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

**(ರಜಪೂತರಿಗೆ ಸಂಬಂಧಿಸಿದವು)**

**೧೧ ವೈಭವ**—ಇದು ಚಾಣಿಕ್ಯ-ಚಂದ್ರಗುಪ್ತರಿಗೆ ಸಂಬಂಧಿಸಿದ ಅತಿ ಮನೋಹರವಾದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಇದನ್ನು ಓದಲು ಕೈಯಲ್ಲಿ ತಕ್ಕೊಂಡವರು ಪೂರ್ಣವಾಗಿ ಮುಗಿಸದೆ ಕೆಳಗಿಡುವ ಹಾಗಿಲ್ಲೆಂದು ನಾವು ನಂಬಿಗೆಯಿಂದ ಹೇಳುವೆವು. ಕನ್ನಡ ಮುದ್ರಾ ಮಂಜೂಷಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

**೧೨ ಕ್ಷಾತ್ರತೇಜ**—ಈ ಐತಿಹಾಸಿಕ ಕಾದಂಬರಿಯಲ್ಲಿ ಔರಂಗಜೇಬನ ಹಾಗು ರಜಪೂತರ ಗುಣಸ್ವಭಾವಗಳು ಚಿತ್ತಾಕರ್ಷಣಪೂರ್ವಕವಾಗಿ ಗೊತ್ತಾಗುತ್ತವೆ. ಇದರಲ್ಲಿ ರೂಪಮತಿಯ ಕುಲೀನತೆ, ಇಂದಿರೆ- ಪದ್ಮೆ- ದುರ್ಗಾದಾಸ ಇವರ ಸ್ವಾಮಿನಿಷ್ಠೆ, ಚಂದ್ರಾವತೀರಾಣಿಯ ತೇಜಸ್ವಿತೆ, ವೈಕುಂಠಯೋಗಿಗಳ ನಿಸ್ಪೃಹತೆ, ಮೊದಲಾದವನ್ನು ಸಾಂಸಾರಿಕರಾದ ನಾವು ಲಕ್ಷಪೂರ್ವಕ ಅವಲೋಕಿಸಬಹುದಾಗಿದೆ. ಇದನ್ನು ಮುಂಬಯಿ ವಿದ್ಯಾಖಾತೆಯವರು ಮೆಟ್ರಿಕ್ಕಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ೦ ೪ ಆಣೆ.

**೧೩ ಸತ್ವಸಾರ**—ಇದೊಂದು ಸುಂದರವಾದ ಐತಿಹಾಸಿಕ ಕಾದಂಬರಿಯು. ಮೇವಾಡದ ಸುಪ್ರಸಿದ್ಧ ಮಹಾರಾಣಾ-ಪ್ರತಾಪಸಿಂಹನು ಈ

ಕಾದಂಬರಿಯ ನಾಯಕನಾಗಿದ್ದಾನೆ. ಮಹಾತ್ಮರ ಸತ್ವದಿಂದಲ್ಲದೆ ಕೇವಲ ದ್ರವ್ಯಾದಿ ಉಪಕರಣಗಳಿಂದ ಮಹಾಕಾರ್ಯಗಳು ಆಗುವದಿಲ್ಲವೆಂತಲೂ, ಸತ್ವಶಾಲಿಯನ್ನು ದ್ರವ್ಯವು ತಾನಾಗಿ ಹೋದುವದೇತಲೂ ಈ ಕಾದಂಬರಿಯು ಕಲಿಸುವದು. ಇದನ್ನು ಕನ್ನಡಿಗರು ಈ ಕಾಲದಲ್ಲಿ ಓದಿಯೇ ತೀರಬೇಕೆಂದು ಆಗ್ರಹದಿಂದ ಹೇಳುವೆನು. ಇದನ್ನು ಮುಂಬಯಿ ಯೂನಿವರ್ಸಿಟಿಯವರು ಟೆಕ್ಸಬುಕ್ಕಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ

**೧೪ ತಿಲೋತ್ತಮೆ**—ಇದೂ ಒಂದು ಐತಿಹಾಸಿಕ ಮನೋಹರ ಕಾದಂಬರಿಯೇ ಇರುತ್ತದೆ. ಈ ಕಾದಂಬರಿಯಲ್ಲಿಯ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಸಹವಾಸದಿಂದ ವಾಚಕರ ಹೃದಯವು ದ್ರವಿಸಿ ಅದರಲ್ಲಿ ಸದ್ಗುಣಗಳ ಅಂಕುರಗಳು ತೋರದೆ ಇರವು. ಬೆಲೆ ೧ ರೂ. ಪೋ. ೪ ಆಣೆ.

**೧೫ ಮೃಣಾಲಿನಿ**—ಇದಕ್ಕೆ ಈ ಹೊಸ ಆವೃತ್ತಿಯಲ್ಲಿ ಹೆಚ್ಚು ವಿಷಯವನ್ನು ಸೇರಿಸಿ ದೊಡ್ಡಪುಸ್ತಕವಾಗಿ ಮಾಡಿರುತ್ತದೆ. ಈ ಐತಿಹಾಸಿಕ ಕಾದಂಬರಿಯಾದರೂ ಅತ್ಯಂತ ಚಿತ್ತಾಕರ್ಷಕವಾಗಿರುವದು. ಇದರಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರ್ಯವೆಷ್ಟು! ಶಾಬಸ! ಕಾದಂಬರಿಕಾರರಿದ್ದರೆ ಬಂಕೀಮಚಂದ್ರರಂಥ ಕಾದಂಬರಿಕಾರರಿರಬೇಕು ! ಈ ಕಾದಂಬರಿಗೆ ಹೊಸದಾಗಿ ಜೋಡಿಸಿದ ವಿಷಯವು ಸ್ವತಂತ್ರವಾಗಿ ಬರೆದದ್ದು. ಬೆಲೆ ೧ ರೂ ೮ ಆಣೆ. ಪೋ ೫ ಆಣೆ.

**೧೬ ಧರ್ಮರಹಸ್ಯ**—ಇದೊಂದು ಗಂಭೀರ ವಿಚಾರದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಅಶೋಕರಾಜ, ಚಿದಾನಂದಸ್ವಾಮಿ, ಜಿತೇಂದ್ರ, ಮೊಗ್ಗಲೀಪುತ್ರ ಮೊದಲಾದ ನೀಚೋಚ್ಚ ಪಾತ್ರಗಳ ವಕ್ರ-ಸರಲ-ಗತಿಗಳೂ, ಅನುದಾತ್ತ-ಉದಾತ್ತ ಭಾವಗಳೂ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವೆಂಬದನ್ನು ಬರೆಯಲಾರೆವು. ಈ ಪುಸ್ತಕವನ್ನು ಬರೆಯಲುಪಕ್ರಮಿಸಿದಾಗ ಹಲವು ಸಾರೆ ಕಣ್ಣೀರುಗಳು ಉದುರಿರುವವು. ಇದನ್ನುಮೈಸೂರ ವಿದ್ಯಾಖಾತೆಯವರು ಮ್ಯಾಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೧೭ ಸಂಸಾರಸುಖ**—ಇದು ಅಕಬರಬಾದಶಹನಿಗೆ ಸಂಬಂಧಿಸಿದ ಕಾದಂಬರಿಯು. ಅಂತಹ ದೊಡ್ಡ ಬಾದಶಹನೆಂದರೇನು, ಕಡೆಗೆ ಸಂಸಾರದ ತಾಪದಿಂದ ಹಣ್ಣಾದನು. ಮಾನಸಿಂಹನ ಸೋದರಳಿಯನಾದ ಖುಸರುವಿನ ದುರ್ದೈವವನ್ನು ನೆನಿಸಿ ಮನಸ್ಸು ವಿಷಾದಪಡುವದು. ರಾಜತೃಷ್ಣೆಯು ಎಷ್ಟು ಅನರ್ಥಕಾರಕವೆಂಬುದನ್ನು ಈ ಕಾದಂಬರಿಯು ತಿಳಿಸುತ್ತದೆ. ಬೆಲೆ ೧ ರೂ. ಪೋ. ೪ ಆಣೆ.

**೧೮ ರಾಣಾ ರಾಜಸಿಂಹ**—ಇದು ಔರಂಗಜೇಬನ ಕಾಲದ ಐತಿಹಾಸಿಕ ಹೊಸ ಕಾದಂಬರಿಯು. ಇದರಲ್ಲಿ ರಾಣಾರಾಜಸಿಂಹನ ಘನವಾದ ಯೋಗ್ಯತೆಯೂ, ಔರಂಗಜೇಬನ ಉದ್ದಾಮ ಮಹತ್ವಾಕಾಂಕ್ಷೆಯೂ, ಅನಂತ ಶರ್ಮರ ಸತ್ವವೂ, ಮೊಗಲಜನಾನಖಾನೆಯ ಸ್ಥಿತಿಯೂ ಚನ್ನಾಗಿಚಿತ್ರಿಸಿರುತ್ತವೆ. ಬೆಲೆ ೧೨ ಆಣೆ. ಪೋ. ೪ ಆ.

**೧೯ ಧಾರ್ಮಿಕತೇಜ**—ಇದು ಅತ್ಯಂತ ಗೌರವದ ಮನೋಹರ ಐತಿಹಾಸಿಕ ಹೊಸ ಕಾದಂಬರಿಯು. ಛತ್ರಸಾಲನೆಂಬ ಪ್ರತಾಪಿಯಾದ ಕ್ಷತ್ರಿಯನು ಔರಂಗಜೇಬ ಬಾದಶಹನ ಕಾಲದಲ್ಲಿ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸ್ಥಾಪಿಸಿದ ವೃತ್ತಾಂತವು ಬಹು ಗಂಭೀರವಾಗಿ ವರ್ಣಿಸಲ್ಪಟ್ಟಿರುತ್ತದೆ. ಪ್ರಾಣನಾಥ ಪ್ರಭುಗಳ ಮಹಿಮೆಯಲ್ಲಿಯೂ, ದಲಪತರಾಯ-ಶುಭಾಕರಣ-ಹೀರಾದೇವಿ- ಘುಫಲದೇವಿ- ಕಂಚುಕಿರಾಯ- ರಣದುಲ್ಲಾಖಾನ ಮೊದಲಾದ ನೀಚೋಚ್ಚ ಪಾತ್ರಗಳ ಚರಿತ್ರ ವಾಚನದಲ್ಲಿಯೂ ಮನಸ್ಸು ತೊಡಗಿಹೋಗುವದು. ಬೆಲೆ ೧ ರೂ. ೮ ಆಣೆ. ಪೋ. ೫ ಆಣೆ.

**೨೦ ಪ್ರಬುದ್ಧ ಪದ್ಮನಯನೆ**—ಇದೊಂದು ಕನ್ನಡಿಗರ ಪ್ರೀತಿಯ ಅತಿಮನೋಹರವಾದ ಸ್ವತಂತ್ರ ಕಾಲ್ಪನಿಕ ಕಾದಂಬರಿಯು. ಈವರೆಗೆ ಈ ಕಾದಂಬರಿಯ ಐದು ಆವೃತ್ತಿಗಳಾಗಿ ಹೋಗಿರುವವು. ಇದರ ಭಾಷಾಂತರವನ್ನು ಸಂಸ್ಕೃತದಲ್ಲಿ ಒಬ್ಬರು ಮಾಡಿರುವರು. ಹಳ್ಳಿಯ ಜನರು ಇದರ ಆಟಗಳನ್ನು ಕಟ್ಟಿ ಆಡಿರುವರು. ರಸಿಕರು ಅವಶ್ಯವಾಗಿ ಓದತಕ್ಕ ಕಾದಂಬರಿಯು. ಬೆಲೆ ೧ ರೂ. ಪೋ. ೪ ಆಣೆ.

*

## ಪುರಾಣಿಕ ಗ್ರಂಥಗಳು

೨೧ **ಭಾಗವತಾಮೃತ**— ಆಬಾಲವೃದ್ಧರನ್ನು ಅವರವರ ಪರಿಯಿಂದ ಕೃತಾರ್ಥರಾಗಮಾಡುವ ಈ ಸರ್ವೋತ್ತಮ ಪುರಾಣಗ್ರಂಥವು ಹೆಸರಿಗೆ ತಕ್ಕಂತೆಯೇ ಅಮೃತೋಪಮಾನವಾಗಿರುವದು. ವಾಚಕರು ಶೈವರಿರಲಿ, ವೀರಶೈವರಿರಲಿ, ವೈಷ್ಣವರಿರಲಿ, ವೀರವೈಷ್ಣವರಿರಲಿ, ದ್ವೈತಾದ್ವೈತಾದಿ ವಿಶಿಷ್ಟ ಮತದವರು ಇರಲಿ, ಅವೈದಿಕರು ಇರಲಿ, ಯಾರಿದ್ದರೂ ಸನಾತನವಾದ ಧರ್ಮತತ್ವಗಳನ್ನು ಅರಿತುಕೊಳ್ಳುವದಕ್ಕಾಗಿ ಈ ಆಧ್ಯಾತ್ಮಿಕವಾದ ಶ್ರೇಷ್ಠಗ್ರಂಥವನ್ನು ಓದಲೇಬೇಕೆಂದು ನಾವು ಒತ್ತಿ ಒತ್ತಿ ಹೇಳುವೆವು. ಪೂರ್ಣ ಓದಿದ ಬಳಿಕ ಪುಸ್ತಕವು ನಿರುಪಯುಕ್ತವಾಗಿ ಕಂಡಲ್ಲಿ ಅದನ್ನು ನಮಗೆ ತಿರುಗಿ ಕಳಿಸಿ ಹಣಪಡೆಯಬಹುದು. ಈ ಶ್ರೇಷ್ಠಪುಸ್ತಕದ ಬೆಲೆ ೩ ರೂ ೮ ಆಣೆ. ಪೋ. ೮ ಆಣೆ.

೨೨ **ಶೈವಸುಧಾರ್ಣವ**–ಕೈಯಲ್ಲಿ ಹಿಡಿದರೆ ಪೂರಾಸೇವಿಸದೆ ಕೆಳಗಿಡಲಾಗದ ಈ ಶೈವೀಸುಧೆಯು ಶಿವಭಕ್ತರಿಗಷ್ಟೇ ಅಲ್ಲ, ಅನ್ಯದೇವತೆಗಳ ಔಪಾಸಕರಿಗೂ ಶಾಂತಿಯನ್ನು ಕೊಡಲು ಸಮರ್ಥವಾಗಿರುವದು. ಇದರಲ್ಲಿ ಮೂರು ಭಾಗಗಳಿದ್ದು "ಶಿವಚರಿತ್ರಸಂಗ್ರಹ" ಎಂಬ ಒಂದನೆಯ ಭಾಗದಲ್ಲಿ ಮನೋಹರ ಶಿವಚರಿತ್ರಗಳನ್ನು ಬೋಧಿಸುವ ಹನ್ನೊಂದು ಸುಧಾತರಂಗಗಳನ್ನು, "ಜ್ಞಾನಪ್ರದೀಪ" ವೆಂಬ ಎರಡನೆಯ ಭಾಗದಲ್ಲಿ ಜ್ಞಾನದಾಯಕ ವಿಷಯಗಳನ್ನೂ ಬೋಧಿಸುವ ಹನ್ನೊಂದು ಜ್ಞಾನಪ್ರದೀಪ ಕಿರಣಗಳನ್ನೂ, ಕಟ್ಟಕಡೆಗೆ "ಶಿವಸ್ತುತಿಗಳು" ಎಂಬ ಮೂರನೆಯ ಭಾಗದಲ್ಲಿ ಶ್ರೀ ಶಿವಕವಚ, ಶ್ರೀ ಶಿವಮಹಿಮ್ನಸ್ತೋತ್ರ ಮುಂತಾದ ಹನ್ನೊಂದು ಸಂಸ್ಕೃತ ಶಿವಸ್ತುತಿಗಳನ್ನೂ ಹೀಗೆಒಟ್ಟಿಗೆ ೩೩ ವಿಷಯಗಳ ನಿರೂಪಣವಾಡಿರುತ್ತದೆ. ಸಮಾಜದ ಕ್ಷೋಭಕ್ಕೆ ಕಾರಣವಾಗಿರುವ "ವ್ಯಾಸನತೋಳು" "ಶರಭಾವತಾರ" ಮುಂತಾದ ವಿಷಯಗಳ ಸಮಾಧಾನಕಾರಕ ರಹಸ್ಯವು ಇದರಲ್ಲಿ ವಿವೇಚಿಸಲ್ಪಟ್ಟಿರುವದು. ಈ ಪುಸ್ತಕದಲ್ಲಿಯ ನಾಲ್ಕನೆಯ ಸುಧಾತರಂಗದಿಂದ ಬಹುತರ ಮುಂದಿನ ಪ್ರತಿಒಂದು ಸುಧಾತರಂಗದ ಕೊನೆಯಲ್ಲಿಕೊಟ್ಟಿರುವ ರಹಸ್ಯ-ಸ್ಪಷ್ಟೀಕರಣವನ್ನುವಾಚಕರುಓದಿಯೇ ತೀರತಕ್ಕದ್ದು. ಒಂದು

ಬಗೆಯಿಂದ ರಹಸ್ಯಲೇಖನದ ಉದ್ದೇಶದಿಂದಲೇ ಈ ಕಲ್ಯಾಣಕಾರಕ ಶೈವ ಸುಧಾರ್ಣವವು ಬರೆಯಲ್ಪಟ್ಟಿರುವದೆಂದು ಹೇಳಬಹುದು. ಈ ಪುಸ್ತಕವು ನಿರರ್ಥಕವಾದದ್ದೂ ನೀರಸವಾದದ್ದೂ ಎಂದುಕಂಡರೆ ನಿರ್ಬಾಧವಾಗಿ ತಿರುಗಿ ಕಳಿಸಬಹುದು. ಈ ದೊಡ್ಡ ಪುಸ್ತಕದ ಬೆಲೆ ೩-೮-೦. ಪೋ. ೦-೮-೦

೨೩ ತುಲಸೀರಾಮಾಯಣ-ಈ ಸರ್ವೋತ್ಕೃಷ್ಟಗ್ರಂಥವನ್ನು ಭಗವದ್ಭಕ್ತ ಶಿಖಾಮಣಿಗಳಾದ ಶ್ರೀ ತುಲಸೀ ದಾಸರವರು ಬರೆದಿರುವರು. ಇಂಥ ಭಕ್ತಿಪ್ರಧಾನವಾದ ಗ್ರಂಥಗಳು ಶ್ರವಣ-ಮನನ-ನಿದಿಧ್ಯಾಸಗಳಿಗೆ ಅತ್ಯಂತ ಯೋಗ್ಯವಾಗಿರುವವು. ಈ ತುಲಸೀ ರಾಮಾಯಣದ ಅವಲೋಕನದಿಂದ ವಿವೇಕಿಗಳ ತರ್ಕ-ವಿತರ್ಕ ಶಕ್ತಿಯು ತಗ್ಗಿ, ಗುರುಹಿರಿಯರ ವಿಷಯವಾಗಿಯೂ, ದೇವರ ವಿಷಯವಾಗಿಯೂ, ಧರ್ಮದ ವಿಷಯವಾಗಿಯೂ, ಸಾಧು-ಸಂತರ ವಿಷಯವಾಗಿಯೂ, ಸದ್ಗ್ರಂಥಗಳ ವಿಷಯವಾಗಿಯೂ ಶ್ರದ್ಧಾ-ಭಕ್ತಿಗಳು ಹೆಚ್ಚಿ ಮನಸ್ಸು ಶುದ್ಧವಾಗಿ ಉದಾರವಾಗುವದು. ಭಗವದ್ಭಕ್ತರಲ್ಲಿರುವ ವಿನಯ, ಸದಾಚರಣೆ, ಉತ್ಕಟ ವೈರಾಗ್ಯ, ನಿರ್ಮಲ ಭಕ್ತಿ, ಸ್ವಕೀಯ ದೋಷ ಪರಿಜ್ಞಾನ, ಪರಗುಣ ಲುಬ್ಧತೆ, ಸಹೃದಯತೆ, ದಯಾಳುತ್ವ ಮುಂತಾದ ಪವಿತ್ರ ಗುಣಗಳ ಸ್ಫೋಟವು ಈ ಕಾವ್ಯದಲ್ಲಿ ಬಹು ಸ್ಪಷ್ಟವಾಗಿ ಆಗಿರುತ್ತದೆ. ಈ ಕಾವ್ಯದಲ್ಲಿ ಶ್ರುತಿ-ಸ್ಮೃತಿ ಸಮ್ಮತವಾಗಿ ಉದಾತ್ತ ಧರ್ಮ ತತ್ವಗಳನ್ನು ಶಾಸ್ತ್ರೀಯ ಪದ್ಧತಿಯಿಂದ ವಿವೇಚಿಸಿರುವದು. ಉತ್ತರ ಹಿಂದುಸ್ಥಾನದಲ್ಲಿ ವೇದದ ತರುವಾಯದಲ್ಲಿ ಈ ಗ್ರಂಥದ ಮಹತ್ವವು ಎಣಿಸಲ್ಪಡುತ್ತಿರುವದು, ಇದರ ಶ್ರೇಷ್ಠತೆಯ ದರ್ಶಕವಾಗಿರುತ್ತದೆ. ಹಿಂದೀ ಭಾಷೆಯಲ್ಲಿ ಈ ಗ್ರಂಥದಷ್ಟು ಲೋಕಪ್ರಿಯವಾದ ಶ್ರೇಷ್ಠಗ್ರಂಥವು ಮತ್ತೊಂದಿಲ್ಲವಂತೆ! ಇದರಲ್ಲಿ ವರ್ಣಿಸಿರುವ ಶ್ರೀರಾಮನ ಬಾಲಲೀಲೆ, ಧನುರ್ಭಂಗ, ಸೀತಾಸ್ವಯಂವರ, ಪರಶುರಾಮ-ರಾಮರ ಸಂವಾದ, ಲಕ್ಷ್ಮಣ-ಪರಶುರಾಮರ ಸಂವಾದ, ಅಂಗದ-ಸಂಧಾನ ಮುಂತಾದ ಒಂದಲ್ಲ ಎರಡಲ್ಲ ಹಲವು ವಿಷಯಗಳು ಅತ್ಯಂತ ಹೃದಯಂಗಮವಾಗಿರುವವು. ಉತ್ತರಕಾಂಡವಂತು ಬಹು ಮಹತ್ವದ ವಿಷಯವು. ಬೆಲೆ ೨ ರೂ. ಪೋ. ೫ ಆಣೆ.

೨೪ ಭಗವತೀ ಕಾತ್ಯಾಯನಿ—ಈ ರಹಸ್ಯಪೂರ್ಣವಾದ ಚಿಕ್ಕ ಕಾದಂಬರಿಯ ಯೋಗ್ಯತೆಯು ಘನತರವಾದದ್ದಿರುವದು. ಭಗವಾನ್ ಯಾಜ್ಞವಲ್ಕ್ಯರ ಹಾಗು ಅವರ ಇಬ್ಬರು ಹೆಂಡಿರಾದ ಕಾತ್ಯಾಯನೀ, ಮೈತ್ರೇಯಿ ಇವರ ಪ್ರಭಾವವು ಇದರಲ್ಲಿ ವಿವರಿಸಲ್ಪಟ್ಟಿರುವದು. ಈ ಕಾದಂಬರಿಗೆ "ಬಂಧವಿಮೋಚನ" ವೆಂಬ ಸುಂದರವಾದ ಅತಿ ಮಹತ್ವದ ಪ್ರಬಂಧವು ಜೋಡಿಸಲ್ಪಟ್ಟಿರುವದರಿಂದ, ಈ ಪುಸ್ತಕದ ಉಪಯುಕ್ತತೆಯು ಮತ್ತಿಷ್ಟು ಹೆಚ್ಚಿರುವದು. ಬೆಲೆ ೮ ಆಣೆ. ಪೋ. ೩ ಆಣೆ.

## ಪ್ರಬಂಧಗಳು

೨೫ ಕುಟುಂಬ— ಈ ಪ್ರಬಂಧವು ಅತ್ಯುಪಯುಕ್ತವಾದ್ದದ್ದು ಮದರಾಸು ಸರಕಾರದವರು ಇದನ್ನು ಟೆಕ್ಸ್ಟ್ ಬುಕ್ಕಾಗಿ ನಿಯಮಿಸಿದ್ದರು ಇದನ್ನು ಓದಿ ತಮ್ಮ ಕುಟುಂಬದ ಸುಧಾರಣೆ ಮಾಡಿಕೊಂಡಿರುವೆವೆಂದು ಜನರು ತಿಳಿಸಿರುವರು. ಬೆಲೆ ೯ ಆಣೆ. ಪೋ. ೩ ಆಣೆ.

೨೬ ದಾಂಪತ್ಯ—ಈ ಸರ್ವೋತ್ಕೃಷ್ಟ ಪ್ರಬಂಧದ ಪ್ರತಿಗಳು ತೀರಿಹೋಗಿರುವದರಿಂದ ಇದರ ವರ್ಣನವನ್ನು ಕೊಡುವದಿಲ್ಲ. ಬೇಗನೆ ಹೊಸ ಆವೃತ್ತಿಯ ದೊಡ್ಡ ಪುಸ್ತಕವು ಸಿದ್ಧವಾಗುವದು.

೨೭ ಸುಂದರಲೇಖ ಸಮುಚ್ಚಯ— ಇದರಲ್ಲಿ ಸುಂದರ ಸ್ಫುಟ ವಿಷಯಗಳ ಸಂಗ್ರಹವಿರುತ್ತದೆ. ಬೆಲೆ ೮ ಆಣೆ. ಪೋ. ೩ ಆಣೆ.

## ಚರಿತ್ರ ಗ್ರಂಥಗಳು

೨೮ ಶ್ರೀ ಚಿಂದಬರಚರಿತ್ರ—ಈ ಪ್ರಾಸಾದಿಕ ಮನೋಹರಚರಿತ್ರದ ಅಲೌಕಿಕತೆಯನ್ನು ಕನ್ನಡಿಗರು ಅನುಭವದಿಂದಲೇ ಅರಿತುಕೊಳ್ಳಬೇಕು. ಇಷ್ಟಾರ್ಥ ಪ್ರದವಾದ ಈ ಸುರಸ ಚರಿತ್ರವು ವಾಚಕರಲ್ಲಿ ಸದ್ಭಾವ-ಸದ್ಭಕ್ತಿ-ಸದಾಚರಣಗಳ ಸಂಜೀವನ ಮಾಡದಿದ್ದರೆ ನಮ್ಮ ಪುಸ್ತಕವನ್ನು ನಮಗೆ ತಿರುಗಿ ಕಳಿಸಿ ಹಣ ಪಡೆದುಕೊಳ್ಳಬಹುದು. ಇದು ಪಾರಾಯಣಕ್ಕೆ ಯೋಗ್ಯವಾದದ್ದೆಂಬವನ್ನು ಸ್ವಂತದ ಅನುಭವದಿಂದಲೂ, ಅನ್ಯರ ಅನುಭವದಿಂದಲೂ ಹೇಳುವೆವು. ಇದು ಭಾವಿಕರ ಕಲ್ಪವೃಕ್ಷ.

ವೆಂದು ತಿಳಿಯಬೇಕು. ಸದಾಚಾರವೆಂದರೇನೆಂಬದನ್ನು ಈ ಪೂಜ್ಯ ಗ್ರಂಥ ದಿಂದ ವಾಚಕರು ಸ್ಪಷ್ಟವಾಗಿ ಅರಿತುಕೊಳ್ಳಬಹುದು. ಬೆಲೆ ೧ ರೂ. ಪೋಸ್ಟೇಜು ೩ ಆಣೆ.

೨೯ **ನಿರ್ಯಾಣ ಮಹೋತ್ಸವ**—ಅಗಡಿಯ ಶ್ರೀ ಶೇಷಾಚಲ ಸದ್ಗುರುಗಳ ನಿರ್ಯಾಣಪ್ರಸಂಗವನ್ನು ಸಾದ್ಯಂತವಾಗಿ ಇದರಲ್ಲಿ ಓದಬಹುದು. ಶ್ರೀ ಗುರುಗಳ ಇದೊಂದು ತಾತ್ವಿಕ ಚರಿತ್ರವೆಂದು ಹೇಳಬಹುದು. ಈ ಚರಿತ್ರವನ್ನು ಬರೆದ ಪ್ರಸಂಗವೇ ಅಷ್ಟು ಉಜ್ವಲವಾದದ್ದರಿಂದ ವಿಷಯವೂ ಅಷ್ಟು ಉಜ್ವಲವಾಗಿಯೇ ಇರುತ್ತದೆ. ಬೆಲೆ ೮ ಆಣೆ. ಪೋ. ೩ ಆಣೆ.

## ಬೇರೆಯವರಿಂದ ಬರೆಸಿದ ಉತ್ತಮ ಗ್ರಂಥಗಳು

೩೦ **ಶ್ರೀ ವೆಂಕಟೇಶ ಮಾಹಾತ್ಮ್ಯ**—ಅತ್ಯಂತ ರಹಸ್ಯಪೂರ್ಣವಾದ ಈ ಪುಸ್ತಕವನ್ನು ಓದಿಯೇ ತೀರಬೇಕು. ಪುರಾಣದ ಆದಿಯಲ್ಲಿ ಗಳಗನಾಥ ಇವರು ಬರೆದ ೩೨ ಪುಟದ ವಿಸ್ತಾರವಾದ ರಹಸ್ಯವು ಜೋಡಿಸಲ್ಪಟ್ಟಿದೆ. ಬೆಲೆ ೧ ರೂ. ಪೋ. ೪ ಆಣೆ.

೩೧ **ಲಕ್ಷ್ಮೀಬಾಯಿ**—ಇದು ಕೈ. ವಾ. ವಲ್ಲಭರಾವ ತಟ್ಟಿ ಇವರು ಬರೆದ ಅತಿ ಮನೋಹರವಾದ ಸಾಮಾಜಿಕ ಕಾದಂಬರಿಯು. ಬೆಲೆ ೧ ರೂ. ಪೋ. ೩ ಆಣೆ.

೩೨ **ಆನಂದ ರಾಮಾಯಣ**—ಈ ಸುಂದರ ಪುಸ್ತಕವು ಅತ್ಯಂತ ಲೋಕಪ್ರಿಯವಾದದ್ದು. ವಿಷಯವು ಮನೋಹರ, ಅತ್ಯಂತ ಬೋಧಪ್ರದ. ಇದನ್ನು ಕೈ. ವಾ. ಶ್ರೀಕಂಠ ಶಾಸ್ತ್ರಿಗಳು ಬರೆದಿರುವರು. ಬೆಲೆ ೧ ರೂ. ೯ ಆಣೆ. ಪೋ. ೫ ಆಣೆ.

೩೩ **ಶುಕಸಂಜೀವಿನಿ**— ಇದು ಗೃಹಸ್ಥಾಶ್ರಮಿಗಳಿಗೆ ಅತ್ಯಂತ ಬೋಧಪ್ರದವಾದ ವಿಷಯವು. ಇದನ್ನು ಮಿ. ಕೃಷ್ಣಾಜಿ ಶಂಕರ ಇಂಗಳಿಗೆ ಇವರು ಬರೆದಿರುವರು. ಬೆಲೆ ೮ ಆಣೆ. ಪೋ. ೩ ಆಣೆ.

೩ **ಗುರು ಪ್ರಸಾದ**— ಈ ಸುರಸ ಕಾದಂಬರಿಯನ್ನಾದರೂ ಕೈ. ವಾ. ತಟ್ಟಿ ಮಾಸ್ತರರೇ ಬರೆದಿರುವರು. ಬೆಲೆ ೧೨ ಆಣೆ. ಪೋ. ೩ ಆಣೆ.



# ಸೂಚನೆ

ಪ್ರಸಿದ್ಧ ಲೇಖಕರಾದ ಗಳಗನಾಥರವರು ಬರೆದಿರುವ ಕೆಳಗಿನ ಪುಸ್ತಕಗಳು ಮಾರಾಟಕ್ಕೆ ಸಿದ್ಧವಾಗಿರುವವು. ಅವುಗಳ ಪ್ರಸಿದ್ಧಿಯು ಕರ್ನಾಟಕದಲ್ಲಿರುವದರಿಂದ ಅವುಗಳ ಗುಣವರ್ಣನವನ್ನು ಹೊಸದಾಗಿ ಮಾಡಲವಶ್ಯವಿಲ್ಲ. ಪುಸ್ತಕಗಳ ಯೋಗ್ಯತೆಯನ್ನು ಅನುಭವದಿಂದ ಮನಗಾಣಬಹುದು.

**೧ ಐತಿಹಾಸಿಕ ಕಾದಂಬರಿಗಳು**

(ಕನ್ನಡಿಗರವು)

| | |
|---|---|
| ಮಾಧವಕರುಣಾ- | |
| " ವಿಲಾಸ | ೩-೧೨-೦ |
| ಕರ್ಮಕಥೆ | ೧- ೮-೦ |
| ಕುಮುದಿನಿ | ೧- ೦-೦ |

(ಮರಾಟರವು)

| | |
|---|---|
| ಈಶ್ವರೀಸೂತ್ರ | ೧- ೦-೦ |
| ಮರಾಟರ ಅಭ್ಯುದಯ | ೧- ೦-೦ |
| ಕಮಲಕುಮಾರಿ | ೧- ೦-೦ |
| ಛತ್ರಪತಿ | ೧- ೦-೦ |
| ಗೃಹಕಲಹ | ೧- ೦-೦ |
| ಶಿವಪ್ರಭುವಿನಪುಣ್ಯ | ೧- ೦-೦ |
| ಕುರುಕ್ಷೇತ್ರ | ೧- ೦-೦ |

(ರಜಪೂತರವು)

| | |
|---|---|
| ವೈಭವ | ೧- ೦-೦ |
| ಧರ್ಮರಹಸ್ಯ | ೧- ೦-೦ |
| ಸತ್ವಸಾರ | ೧- ೦-೦ |
| ಕ್ಷಾತ್ರತೇಜ | ೧- ೦-೦ |
| ರಾಣೀ-ಮೃಣಾಲಿನಿ | ೧- ೮-೦ |
| ತಿಲೋತ್ತಮೆ | ೧- ೦-೦ |
| ಸಂಸಾರಸುಖ | ೧- ೦-೦ |
| ರಾಣಾ-ರಾಜಸಿಂಹ | ೦-೧೨-೦ |
| ಧಾರ್ಮಿಕತೇಜ—(ಪ್ರಿಂಟಿನಲ್ಲಿದೆ) | |

**೨ ಸಾಮಾಜಿಕ ಕಾದಂಬರಿ**

| | |
|---|---|
| ಲಕ್ಷ್ಮೀಬಾಯಿ | ೧- ೦-೦ |
| ಗುರುಪ್ರಸಾದ | ೦-೧೨-೦ |

**೩ ಕಾಲ್ಪನಿಕ ಕಾದಂಬರಿಗಳು**

| | |
|---|---|
| ಪ್ರಬುದ್ಧ ಪದ್ಮನಯನೆ | ೧- ೦-೦ |

**೪ ಪೌರಾಣಿಕ ಗ್ರಂಥಗಳು**

| | |
|---|---|
| ಭಾಗವತಾಮೃತ | ೩- ೮-೦ |
| ಶೈವಸುಧಾರ್ಣವ | ೩- ೮-೦ |
| ತುಳಸೀದಾಸರಾಮಾಯಣಾಮೃತ | ೨- ೦-೦ |
| ಆನಂದರಾಮಾಯಣ | ೧- ೯-೦ |
| ವೆಂಕಟೇಶ ಮಹಾತ್ಮ್ಯ | ೧- ೦-೦ |

**೫ ಚರಿತ್ರಗ್ರಂಥಗಳು**

| | |
|---|---|
| ಚಿದಂಬರ ಚರಿತ್ರ | ೧- ೦-೦ |
| ನಿರ್ಯಾಣಮಹೋತ್ಸವ | ೦- ೮-೦ |
| ಶುಕಸಂಜೀವಿನಿ | ೦- ೮-೦ |

**೬ ಪ್ರಬಂಧಗಳು**

| | |
|---|---|
| ಕುಟುಂಬ | ೦- ೯-೦ |
| ಹಿಂದೂಸಮಾಜವ್ಯವಸ್ಥೆ | ೦- ೫-೦ |
| ಸುಂದರಲೇಖಸಮುಚ್ಚಯ | ೦- ೮-೦ |
| ಸದ್ಗುರುಪ್ರಭಾವ | ೦-೧೨-೦ |

ಪತ್ತಾ:— ಮ್ಯಾನೇಜರ, "ಸದ್ಗುರು, ಸುರಸ ಗ್ರಂಥಮಾಲಾ"

ಆಫೀಸ ಹಾವೇರಿ, ಪೋ. ಹಾವೇರಿ, ಜಿ. ಧಾರವಾಡ